| ಈಗಿನ ಆವೃತ್ತಿ<br>*Present Edition* | III | IV | XIV | ರ<br>*R* |
|---|---|---|---|---|
| 100 | | | | 1933–63 |
| 101 | 133 | | | |
| 102 | | | | 1933–62 |
| 103 | | | | 1933–66 |
| 104 | 94 | | | |
| 105 | | | 161 | |
| 106–13 | | | 162–69 | |
| 114 | | | | 1942–76 |
| 115–17 | | | 170–72 | |
| 118 | | | | 1942–77 |
| 119 | | | | 1942–78 |
| 120 | | | | 1933–59 |
| 121 | | | 173 | |
| 122 | | | 174 | |
| 123 | 93 | | | |
| 124 | | | | |
| 125 | | | | |
| 126 | 72 | | 72 | |
| 127 | | | 268 | |
| 128 | 73 | | | |
| 129 | 74 | | | |
| 130 | 77 | | 77 | |
| 131 | 75 | | | |
| 132 | 76 | | 76 | |
| 133–35 | | | 231–33 | |
| 136 | 92 | | 92 | |
| 137 | | | 250 | |
| 138 | | | 251 | |
| 139 | 54 | | | |
| 140 | 57 | | | |
| 141 | 28 | | 28 | |
| 142 | 29 | | 29 | |
| 143 | 55 | | 55 | |
| 144 | 56 | | 56 | |
| 145 | | | 252 | |
| 146 | | | 253 | |
| 147 | 46 | | | |

| ಈಗಿನ ಆವೃತ್ತಿ *Present Edition* | III | IV | XIV | ರ *R* |
|---|---|---|---|---|
| 148 | | | 236 | |
| 149 | | | 186 | |
| 150 | | | 192 | |
| 151 | | | 191 | |
| 152–54 | | | 188–90 | |
| 155 | | | 193 | |
| 156 | | | 187 | |
| 157 | | | 184 | |
| 158 | | | 182 | |
| 159 | | | 180 | |
| 160 | | | 181 | |
| 161 | 2 | | | |
| 162 | 3 | | 3 | |
| 163 | | | 179 | |
| 164 | 4 | | | |
| 165 | | | 185 | |
| 166 | | | 183 | |
| 167 | | | 178 | |
| 168 | 5 | | 5 | |
| 169 | | | 210*b* | |
| 170 | | | | |
| 171 | | | | |
| 172 | 9 | | | |
| 173 | 7 | | | |
| 174 | 11 | | 11 | |
| 175 | 12 | | | |
| 176 | | | 198 | |
| 177 | 10 | | | |
| 178 | 6 | | | |
| 179 | 8 | | 8 | |
| 180 | | | 197 | |
| 181 | | | | |
| 182 | 14 | | | |
| 183 | | | 196 | |
| 184 | | | | 1938–68 |
| 185 | | | 194 | |
| 186 | | | 195 | |

| ಈಗಿನ ಆವೃತ್ತಿ *Present Edition* | III | IV | XIV | ರ *R* |
|---|---|---|---|---|
| 187 | 13 | | | |
| 188 | 26 | | 26 | |
| 189 | 15 | | | |
| 190 | 16 | | 16 | |
| 191 | | | 207 | |
| 192 | | | 201 | |
| 193 | | | 200 | |
| 194 | | | 202 | |
| 195 | | | | 1938–69 |
| 196 | | | | 1938–70 |
| 197 | | | 199 | |
| 198 | 19 | | | |
| 199 | | | 203 | |
| 200 | | | 204 | |
| 201 | 20 | | 20 | |
| 202 | | | 205 | |
| 203 | | | 206 | |
| 204 | | | 216 | |
| 205 | | | 217 | |
| 206 | 25 | | | |
| 207 | 1 | | | |
| 208 | | | | 1946–11 |
| 209 | | | 209 | |
| 210 | | | 212 | |
| 211 | | | 211 | |
| 212 | | | 213 | |
| 213 | | | 214*a* | |
| 214 | | | 215, 214*b* | |
| 215 | 17 | | | |
| 216 | | | 210*a* | |
| 217 | 24 | | | |
| 218 | 23 | | | |
| 219 | 41 | | | |
| 220 | 44 | | | |
| 221–24 | | | 227–30 | |
| 225 | 42 | | 42 | |
| 226 | 43 | | | |

| ಈಗಿನ ಆವೃತ್ತಿ Present Edition | III | IV | XIV | R |
|---|---|---|---|---|
| 227 | | | 220 | |
| 228 | | | 221 | |
| 229 | 34 | | 34 | |
| 230 | 35 | | 35 | |
| 231 | 32 | | | |
| 232 | | | 219 | |
| 233 | 33 | | 33 | |
| 234 | | | 218 | |
| 235 | 36 | | 36 | |
| 236 | 31 | | | |
| 237 | | | 222 | |
| 238 | 27 | | | |
| 239 | 38 | | 38 | |
| 240 | | | 226 | |
| 241 | | | 224 | |
| 242 | | | 225 | |
| 243 | 39 | | | |
| 244 | 40 | | | |
| 245 | 37 | | | |
| 246 | | | 223 | |
| 247 | 48 | | | |
| 248 | 49 | | | |
| 249 | 52 | | | |
| 250 | 50 | | | |
| 251 | 51 | | | |
| 252 | | | 235 | |
| 253 | | | 234 | |
| 254 | | | | |
| 255 | 53 | | | |
| 256 | 134 | | | |
| 257 | 91 | | | |
| 258 | | | | 1939_57 |
| 259 | | | | 1939_58 |
| 260 | 86 | | | |
| 261 | 78 | | 78 | |
| 262 | 79 | | 79 | |
| 263 | 81 | | 81 | |

| ಈಗಿನ ಆವೃತ್ತಿ *Present Edition* | III | IV | XIV | ಠ *R* |
|---|---|---|---|---|
| 264 | 80 | | 80 | |
| 265–68 | 82–85 | | | |
| 269 | 87 | | 87 | |
| 270 | 88 | | 88 | |
| 271 | 89 | | | |
| 272–79 | | | 257–64 | |
| 280 | | | | |
| 281 | | | | 1938–57 |
| 282 | | | 266 | 1938–58 |
| 283 | 90 | | | |
| 284 | | | 265 | |
| 285 | | | | |
| 286 | | | | 1938–59 |
| 287 | | | | 1938–60 |
| 288 | | | | 1939–53 |
| 289 | | | 269 | 1939–54 |
| 290 | | | | |
| 291 | 71 | | | 1939–56 |
| 292 | | | 267 | |
| 293 | | | | |
| 294 | | | | 1933–64 |
| 295 | | | | 1933–65 |
| 296 | | | | 1938–62 |
| 297 | | | | 1938–63 |
| 298 | | | | 1938–65 |
| 299 | | | | 1938–64 |
| 300 | | | | 1938–66 |
| 301 | | | | 1939–51 |
| 302 | | | 153 | 1939–52 |
| 303 | | | | |
| 304 | | | 154 | |
| 305 | | | 155 | |
| 306 | 70 | | | |
| 307 | | | 151 | |
| 308 | | | 152 | |
| 309–11 | | | 156–58 | |
| 312 | 69 | | | |

| ಈಗಿನ ಆವೃತ್ತಿ Present Edition | III | IV | XIV | ೦ R |
|---|---|---|---|---|
| 313 | | | 160 | |
| 314 | | | 159 | |
| 315 | 45 | | | |
| 316 | 30 | | 30 | |
| 317 | | | 237 | |
| 318 | | | | 1939–55 |
| 319 | | | | 1946–10 |
| 320 | | | | 1938–67 |
| 321 | | | | 1938–61 |
| 322 | | | | 1933–67 |
| 323 | | | | 1926–115 |

# ಪೀಠಿಕೆ

ಪರಿಷ್ಕೃತಗೊಂಡು ಪ್ರಕಟವಾಗುತ್ತಿರುವ ಎಪಿಗ್ರಾಫಿಯ ಕರ್ನಾಟಿಕ ಸಂಪುಟಗಳ ಸರಣಿಯಲ್ಲಿ ಇದು ಐದನೆಯದು ; ಮೈಸೂರು ಜಿಲ್ಲೆಗೆ ಸಂಬಂಧಿಸಿದಂತೆ ಮೂರನೆಯ ಮತ್ತು ಕಡೆಯ ಸಂಪುಟ. ಇದರಲ್ಲಿ ಕೃಷ್ಣರಾಜನಗರ (ಕೃನ) ೧೧೯, ಮೈಸೂರು (ಮೈ) ೨೨೫ ಮತ್ತು ತಿ. ನರಸೀಪುರ (ತಿನ) ೩೨೩ ಹೀಗೆ ಮೂರು ತಾಲ್ಲೂಕುಗಳಿಂದ ಒಟ್ಟು ೬೬೭ ಶಾಸನಗಳಿವೆ. ಇವುಗಳಲ್ಲಿ ೪೦ ಹೊಸ ಶಾಸನಗಳು. ಇದರೊಂದಿಗೆ ಮೂರು ಮತ್ತು ನಾಲ್ಕನೆಯ ಸಂಪುಟಗಳ ೭೮೬ ಮತ್ತು ೯೩೨ ಶಾಸನಗಳೂ ಸೇರಿದಂತೆ ಮೈಸೂರು ಜಿಲ್ಲೆಯ ಪ್ರಕಟಿತವಾದ ಒಟ್ಟು ಶಾಸನಗಳ ಸಂಖ್ಯೆ ೨೩೮೫.

ಈ ಸಂಪುಟದಲ್ಲಿ ಪ್ರಕಟಿಸಿರುವ ೬೬೭ ಶಾಸನಗಳಲ್ಲಿ ತಮಿಳು ಹಾಗೂ ಗ್ರಂಥಲಿಪಿಯಲ್ಲಿರುವ ತಮಿಳು ಶಾಸನಗಳು ೧೧೭, ತಮಿಳು ಲಿಪಿ ಮತ್ತು ಸಂಸ್ಕೃತ ಭಾಷೆಯವು ೨ ಹಾಗೂ ತಮಿಳು ಲಿಪಿ ಮತ್ತು ಕನ್ನಡ ಭಾಷೆಯದು ಒಂದೂ ಸೇರಿವೆ. ಉಳಿದ ಶಾಸನಗಳಲ್ಲಿ ೪೧ ಸಂಸ್ಕೃತದಲ್ಲಿಯೂ ೧೬ ತೆಲುಗಿನಲ್ಲಿಯೂ ಒಂದು ಪರ್ಷಿಯನ್ ಭಾಷೆಯಲ್ಲಿಯೂ ಇದ್ದು ಮಿಕ್ಕವು ಕನ್ನಡದವು. ಅನೇಕ ಕನ್ನಡ ಶಾಸನಗಳ ಕೆಲಭಾಗಗಳು ಸಂಸ್ಕೃತದಲ್ಲಿರುವುದುಂಟು. ಬಹುಪಾಲು ಶಾಸನಗಳ ಮೊದಲಲ್ಲಿ ಬರುವ ಪ್ರಾರ್ಥನೆ ಮತ್ತು ಕಡೆಯಲ್ಲಿ ಬರುವ ಶಾಪವಾಕ್ಯಗಳು ಸಂಸ್ಕೃತದಲ್ಲಿಯೇ ಇರುವುದು ತಿಳಿದೇ ಇದೆ. ಈ ಸಂಪುಟದಲ್ಲಿರುವ ತಿನ ೧೬ನೆಯ ಶಾಸನವನ್ನು ಹದಿನಾರು ತಾಮ್ರದ ಹಲಗೆಗಳ ಮೇಲೆ ಕಂಡರಿಸಲಾಗಿದ್ದು ಹಲಗೆಯ ಒಂದೊಂದು ಮುಖದಲ್ಲೂ ಸುಮಾರು ೪೫ ಪಂಕ್ತಿಗಳಂತೆ ಒಟ್ಟು ೧೩೯೦ ಸಾಲುಗಳ ಈ ಶಾಸನ ಇದುವರೆಗೆ ಕರ್ನಾಟಕದಲ್ಲಿ ದೊರೆತಿರುವ ಶಾಸನಗಳಲ್ಲೆಲ್ಲಾ ಅತಿ ದೀರ್ಘಶಾಸನವಾಗಿದೆ.

ಈ ಸಂಪುಟದಲ್ಲಿನ ಕೆಲವು ತಮಿಳುಶಾಸನಗಳನ್ನು ಓದಿ ಅರ್ಥೈಸುವಲ್ಲಿ ನನಗೆ ನೆರವು ನೀಡಿದ ಕೇಂದ್ರ ಶಾಸನ ಇಲಾಖೆಯ ಶಾಸನ ತಜ್ಞರಾದ ಶ್ರೀ ಕೆ. ಜಿ. ಕೃಷ್ಣನ್‌ರವರಿಗೆ ನನ್ನ ಹೃತ್ಪೂರ್ವಕವಾದ ವಂದನೆಗಳು ಸಲ್ಲುತ್ತವೆ.

## ಗಂಗರು

ಕೊಂಗುಣಿವರ್ಮನ ಮಗ ಗಂಗ ಮಾಧವನ ತಾಮ್ರಶಾಸನವೇ (ಮೈ ೧೦೩) ಪ್ರಸ್ತುತ ಸಂಪುಟದಲ್ಲಿನ ಅತ್ಯಂತ ಪ್ರಾಚೀನ ಶಾಸನ. ಆನೆಯ ಮುದ್ರೆ ಇದ್ದಿತೆಂದು ಹೇಳಲಾದ ಉಂಗುರಕ್ಕೆ ಪೋಣಿಸಿದ ಮೂರು ತಾಮ್ರದ ಹಲಗೆಗಳ ಮೇಲೆ ಕಂಡರಿಸಲಾದ ಈ ಶಾಸನದ ಭಾಷೆ ಸಂಸ್ಕೃತ. ಕುಲುಂಗಿಜ್ಯ ರಾಜ್ಯದಲ್ಲಿ ಗಿರಿನಗರದ ಉತ್ತರದಲ್ಲಿದ್ದ ಕಂಡಸಲ ಎಂಬ ಗ್ರಾಮವನ್ನು ದತ್ತಿಬಿಟ್ಟ ವಿಷಯವನ್ನು ತಿಳಿಸುವ ಈ ಶಾಸನವನ್ನು ರಚಿಸಿದವನು ಸೋಮಶರ್ಮ. ಮೈಸೂರು ಪುರಾತತ್ವ ಇಲಾಖೆಯ ೧೯೨೫ನೆಯ ವಾರ್ಷಿಕ ವರದಿಯಲ್ಲಿ ಮೊದಲು ಪ್ರಕಟವಾದ ಈ ಶಾಸನವು ಮೈಸೂರಿನ ನಿವಾಸಿಗಳೊಬ್ಬರ ಬಳಿ ದೊರೆತಂತೆ ಸೂಚಿತವಾಗಿದೆ. ಇದರ ಪಡಿಯಚ್ಚು ಪ್ರಕಟವಾಗಿಲ್ಲ, ಮೂಲಶಾಸನವನ್ನು ಪರೀಕ್ಷಿಸಲು ಸಾಧ್ಯವಾಗಲಿಲ್ಲ. ಶಾಸನ ದೊರೆತ ಬಗೆಗಾಗಲಿ ಲಿಪಿಯ ಬಗೆಗಾಗಲಿ ಏನನ್ನೂ ತಿಳಿಸಿಲ್ಲ. ದತ್ತಿಬಿಟ್ಟ ಕಂಡಸಲ ಗ್ರಾಮವನ್ನಾಗಲಿ ಗಿರಿನಗರ ಅಥವ ಕುಲುಂಗಿಜ್ಯ ರಾಜ್ಯವನ್ನಾಗಲಿ ಗುರುತಿಸಲು ಸಾಧ್ಯವಾಗದು. ಶಾಸನದ ಕಾಲ ರಾಜನ ಆಳಿಕೆಯ ೯ನೆಯ ವರ್ಷದ ಕಾರ್ತ್ತಿಕ ಶುದ್ಧ ೧೨ ; ಸಂವತ್ಸರವನ್ನು ತಿಳಿಸಿಲ್ಲ; ತಾಳೆ ನೋಡಲು ಈ ವಿವರಗಳು ಸಾಲವು.

ಶಾಸನದಲ್ಲಿ ಮೊದಲು ಕೊಂಗುಣಿವರ್ಮನನ್ನು ಹೆಸರಿಸಿ ಅನಂತರ ಮಾಧವಮಹಾಧಿರಾಜನೆಂದು ಕರೆಯಲ್ಪಟ್ಟ ಮಾಧವವರ್ಮನನ್ನು ವರ್ಣಿಸಲಾಗಿದೆ. ಗಂಗರ ಹಲವು ತಾಮ್ರಶಾಸನಗಳಲ್ಲಿ ಕೊಂಗುಣಿವರ್ಮನನ್ನು ವರ್ಣಿಸಲು ಬಳಸಲಾದ ವಿಶೇಷಣಗಳ ಪರಿಶೀಲನೆಯಿಂದ "ಸ್ವಖಡ್ಗೈಕಪ್ರಹಾರಖಣ್ಡಿತಮಹಾಶಿಲಾಸ್ತಂಭಲಬ್ಧಬಲಪರಾಕ್ರಮ" ಎಂಬ ವಿಶೇಷಣವು ಅಧಿಕ ಸಂಖ್ಯೆಯ ಶಾಸನಗಳಲ್ಲಿಯೂ "ಸ್ವಭುಜಜವಜಯಜನಿತಸುಜನಜನಪದ" ಎಂಬುದು ಕೆಲವು ಶಾಸನಗಳಲ್ಲಿಯೂ ಇರುವುದು ಕಂಡುಬರುತ್ತದೆ. ಮೊದಲನೆಯದು ಶಿಲಾಸ್ತಂಭವನ್ನು ತುಂಡರಿಸಿದ ಈತನ ಸಾಹಸವನ್ನು ತಿಳಿಸಿದರೆ ಎರಡನೆಯದು ತನ್ನ ಭುಜಬಲದಿಂದ ಗೆದ್ದ, ಸುಜನರಿಂದ ಕೂಡಿದ ರಾಜ್ಯವನ್ನು ಹೊಂದಿದ್ದನೆಂದು ವರ್ಣಿಸುತ್ತದೆ. ಪ್ರಕೃತ ಶಾಸನದಲ್ಲಿ ಈ ವರ್ಣನೆಗಳಿಲ್ಲ. ಅದರ ಬದಲು ಕೊಂಗುಣಿವರ್ಮನು ಚುರುಕುಬುದ್ಧಿಯುಳ್ಳವನೂ ನಾನಾ ಶಾಸ್ತ್ರಗಳ ಆಳವಾದ ಅಧ್ಯಯನದಿಂದ ಸಂಪನ್ನನಾದವನೂ ಅನೇಕ ಯುದ್ಧಗಳನ್ನು ಜಯಿಸಿ ಕೀರ್ತಿಶಾಲಿಯಾದವನೂ ಎಂದು ಶಾಸನ ತಿಳಿಸುತ್ತದೆ. ಬೇರೆ ಶಾಸನಗಳಲ್ಲಿ ಇವನ ಬಗೆಗೆ ಬರುವ "ದಾರುಣಾರಿಗಣವಿದಾರಣೋಪಲಬ"

ಈಗಾಗಲೇ ಪ್ರಕಟವಾಗಿರುವ ಸಂಪುಟಗಳಲ್ಲಿರುವ ಶಾಸನಗಳ ಹಂಚಿಕೆಯನ್ನು ಕೆಳಗಿನ ಪಟ್ಟಿಯಲ್ಲಿ ತೋರಿಸಲಾಗಿದೆ.

| ತಾಲ್ಲೂಕು | ಸಂ. III (ಮೊದಲನೆಯ ಆವೃತ್ತಿ) | ಸಂ. IV (ಮೊದಲನೆಯ ಆವೃತ್ತಿ) | ಸಂ. XIV | ಎಂ. ಎ. ಆರ್. (1923ನೆಯ ಹಾಗೂ ನಂತರದ ವರ್ಷಗಳದ್ದು) | ಹೊಸದು (ಈಗಿನ ಸಂಪುಟದಲ್ಲಿ ಸೇರಿಸಿದವು) | ಒಟ್ಟು | ಷರಾ |
|---|---|---|---|---|---|---|---|
| ರಾಜನಗರ | — | 61 | 43 | 5 | 10 | 119 | ಹಳೆಯ ಸಂಪುಟಗಳಲ್ಲಿನ ಸನ್ನದು, ಶಾಸನದ ನಕಲು ಮತ್ತು ಇತ್ತೀಚಿನ ಶಾಸನ—ಇವುಗಳನ್ನು ಸೇರಿಸಿಲ್ಲ. |
| ರು | 60<br>–5(ಅ) | — | 85<br>–1(ಆ)<br>+1(ಇ) | 16ಸನ್ನದು<br>2ಪರಿಷ್ಕೃತ<br>68 | 17 | 225 | (ಅ,ಆ) III ಮತ್ತು XIVನೆಯ ಸಂಪುಟಗಳ ಆರು ಶಾಸನಗಳನ್ನು (ಸಂಖ್ಯೆ 27–31, 117) ಸೇರಿಸಿಲ್ಲ.<br>(ಇ) XIVನೆಯ ಸಂಪುಟದ 132ನೆಯ ಶಾಸನವನ್ನು ಎರಡು ಶಾಸನಗಳನ್ನಾಗಿ ವಿಭಾಗಿಸಿದೆ. |
| ರಸೀಪುರ | 4ಸನ್ನದು<br>6(ಅ)<br>130<br>+1(ಆ) | — | 4ಸನ್ನದು<br>130<br>+1(ಇ) | 1ಸನ್ನದು<br>1ಪರಿಷ್ಕೃತ<br>48 | 13 | 323 | (ಅ) ಹಿಂದಿನ ಆವೃತ್ತಿಯಲ್ಲಿ ತಿ. ನರಸೀಪುರ ತಾಲ್ಲೂಕಿಗೆ ಸೇರಿಸಿದ್ದ ಕೆಂಪನಪುರ ಗ್ರಾಮದ ನಾಲ್ಕು ಶಾಸನಗಳು (ಸಂಖ್ಯೆ 135–38) ಮತ್ತು ಕಣ್ಣೇಗಾಲಗ್ರಾಮದ ಎರಡು ಶಾಸನಗಳನ್ನು (ಸಂಖ್ಯೆ 139, 140) ಚಾಮರಾಜನಗರ ತಾಲ್ಲೂಕಿಗೆ ಸೇರಿಸಿದೆ.<br>(ಆ) ಹಿಂದಿನ ಆವೃತ್ತಿಯ 123 ಮತ್ತು 123ಎ ಶಾಸನಗಳಿಗೆ ಈಗಿನ ಆವೃತ್ತಿಯಲ್ಲಿ 58 ಮತ್ತು 59 ಎಂದು ಎರಡು ಶಾಸನಸಂಖ್ಯೆಗಳನ್ನು ನೀಡಿದೆ.<br>(ಇ) ಹಿಂದಿನ ಆವೃತ್ತಿಯ 210ನೆಯ ಶಾಸನವನ್ನು ಎರಡು ಶಾಸನಗಳನ್ನಾಗಿ ವಿಭಾಗಿಸಿದೆ. |
| ಟ್ಟು | 186 | 61 | 259 | 121 | 40 | 667 | |

ಮುಂತಾದ ವರ್ಣನೆಯೂ ಇಲ್ಲಿಲ್ಲ. ಇಂಥದೇ ಮತ್ತೊಂದು ಈತನ ನಿಟ್ಟೂರು ಶಾಸನ.[1] ಇದು ಗಮನಿಸಬೇಕಾದ ವಿಷಯ. ಬಹುಶಃ ಈ ಶಾಸನದ ಕಾಲಕ್ಕೆ ಮೇಲೆ ತಿಳಿಸಿರುವ ವಿಶೇಷಣಗಳ ಒಂದು ಸಿದ್ಧರೂಪವನ್ನು ಬಳಕೆಗೆ ತಂದಿರಲಿಲ್ಲವೇನೋ ಎನ್ನಿಸುತ್ತದೆ. ಈ ಅರಸನ ಶಾಸನಕೋಟೆ ತಾಮ್ರಶಾಸನದ ಕಾಲ[2] ಅರಸನ ಆಳಿಕೆಯ ಮೊದಲ ವರ್ಷ. ಅದನ್ನು ನೈಜಶಾಸನವೆಂದು ಪರಿಗಣಿಸಲಾಗಿದೆ. ಆದ್ದರಿಂದ ಈ ಅರಸನ ನೈಜಶಾಸನಗಳಲ್ಲಿ ಇದು ಎರಡನೆಯ ದೆನ್ನಬಹುದು. ಆದರೆ ಮೂಲವನ್ನು ನಾವು ಪರೀಕ್ಷಿಸಿಲ್ಲವಾದ್ದರಿಂದ ಇದವಿತ್ಥಂ ಎಂದು ಸ್ಪಷ್ಟವಾಗಿ ಹೇಳುವುದು ಕಷ್ಟ.

ಸಾಲಿಗ್ರಾಮದಲ್ಲಿ ದೊರೆತ ಕೈನ ೪೮ ಐದು ತಾಮ್ರದ ಹಲಗೆಗಳ ಮೇಲೆ ಕಂಡರಿಸಿರುವ ಗಂಗ ಶ್ರೀಪುರುಷನ ಶಾಸನ; ಸು.ಕ್ರಿ.ಶ. ೭೨೫ರಲ್ಲಿ ಆರಂಭವಾದ ಅವನ ಆಳಿಕೆಯ ಮೊದಲ ವರ್ಷಕ್ಕೆ ಸೇರಿದುದು. ವಾತಾಪಿ ವಾಸ್ತವ್ಯನಾದ ಬಾಣಶರ್ಮನಿಗೆ ತೇಗಟ್ಟೂರ್‌ವಿಷಯದಲ್ಲಿದ್ದ ಬಾರದೂರು ಗ್ರಾಮವನ್ನು ದತ್ತಿಬಿಟ್ಟುದನ್ನು ಇದು ತಿಳಿಸುತ್ತದೆ. ವಾತಾಪಿಯು ಪಶ್ಚಿಮ ಚಾಲುಕ್ಯರ ರಾಜಧಾನಿಯಾಗಿದ್ದ ಬಾದಾಮಿ ಎನ್ನುವುದು ಸ್ಪಷ್ಟ. ಪಶ್ಚಿಮ ಚಾಲುಕ್ಯರ ಕಡೆಯ ಮೂವರು ದೊರೆಗಳಾದ ವಿಜಯಾದಿತ್ಯ, ಇಮ್ಮಡಿ ವಿಕ್ರಮಾದಿತ್ಯ ಮತ್ತು ಇಮ್ಮಡಿ ಕೀರ್ತಿವರ್ಮ — ಇವರು ಶ್ರೀಪುರುಷನ ಸಮಕಾಲೀನರು. ಇವರ ನಡುವೆ ಮಧುರ ಬಾಂಧವ್ಯವಿತ್ತು. ಅವರು ಪಲ್ಲವರ ವಿರುದ್ಧ ಹೂಡಿದ ಯುದ್ಧಗಳಲ್ಲಿ ಶ್ರೀಪುರುಷನು ಅವರಿಗೆ ನೆರವಾಗಿದ್ದನು. ಬಾದಾಮಿಯ ಬಾಣಶರ್ಮನು ಏಕೆ ಮತ್ತು ಹೇಗೆ ಈ ದತ್ತಿಯನ್ನು ಪಡೆದ ಎಂಬುದು ಸ್ಪಷ್ಟವಾಗಿಲ್ಲ. ಆತನೋ, ಆತನ ಪೂರ್ವಜರೋ ಆ ಪ್ರದೇಶದಿಂದ ಈ ಕಡೆ ವಲಸೆ ಬಂದಿರಬಹುದು. ತೇಗಟ್ಟೂರು ವಿಷಯವು ಬೆಂಗಳೂರು ತಾಲ್ಲೂಕಿನ ತೇಗಲ್ಪಟ್ಟು ಗ್ರಾಮದ ಸುತ್ತಮುತ್ತಲ ಪ್ರದೇಶವಾಗಿರಬೇಕೆಂದು ಎಂ. ಎಚ್. ಕೃಷ್ಣ ಅವರು ಗುರುತಿಸಿದ್ದಾರೆ.

ಈ ಶಾಸನದಲ್ಲಿ ಶ್ರೀಪುರುಷನ ತಾತ ಒಂದನೆಯ ಶಿವಮಾರನನ್ನೂ ಶ್ರೀಪುರುಷನೆಂದೇ ಹೆಸರಿಸಿದೆ. ಬೇರೆ ಯಾವ ಶಾಸನಗಳಲ್ಲಿಯೂ ಒಂದನೆಯ ಶಿವಮಾರನಿಗೆ ಈ ಹೆಸರಿರುವುದು ಕಂಡುಬಂದಿಲ್ಲ. ಈತನನ್ನು "ಪೃಥಿವೀಕೊಙ್ಗಣಿವೃದ್ಧರಾಜ"ನೆಂದೂ ಶಾಸನದ ಕರ್ತನಾದ ಶ್ರೀಪುರುಷನನ್ನು "ಪೃಥುವೀಕೊಙ್ಗಣಿಮಹಾರಾಜ"ನೆಂದೂ ಕರೆದಿದ್ದರೆ, ಒಂದನೆಯ ಶಿವಮಾರನ ಅಣ್ಣ ಭೂವಿಕ್ರಮನನ್ನು ''ಕೊಙ್ಗಣಿಮಹಾರಾಜ''ನೆಂದು ಕರೆದಿದೆ. ಭೂವಿಕ್ರಮ ಎನ್ನುವುದು ಅವನ ಎರಡನೆಯ ಹೆಸರೆಂದೂ ಶಾಸನ ತಿಳಿಸುತ್ತದೆ. ಶ್ರೀವಲ್ಲಭ ಎಂದು ಭೂವಿಕ್ರಮನನ್ನು ಹೆಸರಿಸಿದ್ದು, ಅವನನ್ನು ''ಪೃಥಿವೀ ಕೊಙ್ಗಣಿವೃದ್ಧರಾಜ'' ಎಂದು ವರ್ಣಿಸಿರುವ ಒಂದನೆಯ ಶಿವಮಾರನ ಕುಲಗಾಣ ತಾಮ್ರಶಾಸನವನ್ನು[3] ಇದರೊಂದಿಗೆ ಹೋಲಿಸಬಹುದು. ಶ್ರೀಪುರುಷ ಎಂಬುದು ಮೊದಲನೆಯ ಶಿವಮಾರನ ಬಿರುದಾಗಿದ್ದು, ಆತನ ಮೊಮ್ಮಗನಿಗೆ ಅದೇ ಬಿರುದಿನ ಹೆಸರನ್ನು ಕೊಟ್ಟಿರಬಹುದಾದ ಸಾಧ್ಯತೆ ಇದೆ.

ತಿನ ೨೦೭ ಶ್ರೀಪುರುಷನ ಆಳಿಕೆಯ ಮೊದಲನೆಯ ವರ್ಷಕ್ಕೆ, ಎಂದರೆ ಕ್ರಿ. ಶ. ೭೨೫ಕ್ಕೆ ಸೇರಿದ ಶಿಲಾಶಾಸನ. ಇದರಲ್ಲಿ ಕೊಟ್ಟಿರುವ ತೇದಿಯು ಇತರ ವಿವರಗಳು, ಎಂದರೆ ಕಾರ್ತ್ತಿಕ ಪುಣ್ಣಮೆ, ತಾಳೆನೋಡಲು ಸಾಕಾಗುವುದಿಲ್ಲ. ಪರಮ ಕೂಳನ ಮಗ ಅರಕೇಸಿಯು ಅಪ್ಪಣೆ ಪಡೆದು ತೆರಿಗೆಗಳನ್ನು ಮನ್ನಾಮಾಡಿದುದನ್ನು ಸೂಚಿಸುವುದು ಶಾಸನದ ಉದ್ದಿಶ್ಯ ವಿದ್ದಂತೆ ತೋರುತ್ತದೆ. ಇಲ್ಲಿ ಅಪ್ಪಣೆ ಕೊಟ್ಟವನು ರಾಜನೇ ಇರಬೇಕು. ಆದ್ದರಿಂದ ಅರಕೇಸಿಯು ಶ್ರೀಪುರುಷನ ಒಬ್ಬ ಅಧಿಕಾರಿಯೆಂದಾಯಿತು. ಇದೇ ರಾಜನ ವೈ೯ ೧೯೨ನೆಯ ಶಾಸನವು ಸಿಙ್ಗದೀಕ್ಷರ 'ಬಾಳಾಳ್' ಆಗಿದ್ದ ಅರಟ್ಟ ತೀರಾರನು ಕೂಡಲೂರನ್ನು ಆಳುತ್ತಿದ್ದನೆಂದು ಹೇಳಿರುವುದರಿಂದ ಸಿಙ್ಗದೀಕ್ಷನು ಒಬ್ಬ ಹಿರಿಯ ಅಧಿಕಾರಿಯಾಗಿದ್ದಿರಬೇಕು. ವೈ೯ ೧೧೭ರಲ್ಲಿ ಮಹಾಪ್ರಭು ಗೋವಪಯ್ಯನೆಂಬುವನು ಸಮಾಧಿವಿಧಿಯಿಂದ ಮುಡಿಪಿದನೆಂದು ಹೇಳಿದೆ. ಶಾಸನದಲ್ಲಿ ಶ್ರೀಪುರುಷನ ಪ್ರಸ್ತಾಪ ಬಂದಿದ್ದು ಗೋವಪಯ್ಯನು ಬಹುಶಃ ಶ್ರೀಪುರುಷನ ಅಧೀನಾಧಿಕಾರಿಗಳಲ್ಲೊಬ್ಬನಾಗಿರಬಹುದು.

ವರುಣದಲ್ಲಿರುವ ಶ್ರೀಪುರುಷನ ಮತ್ತೊಂದು ಶಾಸನ (ವೈ೯ ೧೮೩) ಅರಟ್ಟಿಗಳ ಅರಸ ಚೊತ್ತಮ್ಮನು ಎಡತೊರೆ ನಾಡು ಸಾಸಿರವನ್ನು ಆಳುತ್ತಿದ್ದನೆಂದು ತಿಳಿಸುತ್ತದೆ. ಅದರ ಮುಂದಿನ ಭಾಗ ಸ್ಪಷ್ಟವಾಗಿ ಅರ್ಥವಾಗುವುದಿಲ್ಲ. ಬಹುಶಃ ಸೈನ್ಯವು ಹೋಗುವಾಗ ಒಂದು ದಿನ, ಬರುವಾಗ ಒಂದು ದಿನ ಆಹಾರವನ್ನೊದಗಿಸುವ ಏರ್ಪಾಟು ಮಾಡುವುದಕ್ಕಾಗಿ ಈ ಶಾಸನವನ್ನು ಹಾಕಿಸಿರಬಹುದು. ಬಹುಶಃ ಆ ಗ್ರಾಮವು ದಂಡಿನದಾರಿಯಲ್ಲಿದ್ದು ಸೈನ್ಯಕ್ಕೆ ಆಹಾರವೊದಗಿಸುವ ಜವಾಬ್ದಾರಿ

[1] ಎಂಎಆರ್., 1930, No. 88
[2] ಇ ಐ., XXIV p. 234-39
[3] ಎ ಕ IV (1975), ಪೀಠಿಕೆ ಪು. lxx

ವಳ್ಳಿಮಲೆ ಶಾಸನದಿಂದ[1] ಒಂದನೆಯ ಶಿವಮಾರನ ಮೊಮ್ಮಗ ಶ್ರೀಪುರುಷನಿಗೆ ರಣವಿಕ್ರಮನೆಂಬ ಮಗನಿದ್ದುದೂ ಅವನ ಮಗ ರಾಜಮಲ್ಲನೆಂಬುದೂ ಸ್ಪಷ್ಟಪಡುತ್ತದೆ. ಗಂಗರ ಹಲವು ಶಾಸನಗಳಲ್ಲಿ ಕೊಟ್ಟಿರುವ ವಂಶಾವಳಿಯಲ್ಲಿ ಶ್ರೀಪುರುಷನಿಗೆ ಇಮ್ಮಡಿ ಶಿವಮಾರ ಮತ್ತು ವಿಜಯಾದಿತ್ಯ ಎಂಬ ಇಬ್ಬರು ಮಕ್ಕಳಿದ್ದ ಉಲ್ಲೇಖವಿದೆ. ಮೇಲೆ ತಿಳಿಸಿದ ರಣವಿಕ್ರಮನೇ ವಿಜಯಾದಿತ್ಯನೆಂದು ಗೊತ್ತುಪಡಿಸಲಾಗಿದೆ. ಪ್ರಕೃತ ಶಾಸನದಲ್ಲಿ ರಣವಿಕ್ರಮಯ್ಯನು ರಾಜಮಲ್ಲನ ಮಗನೆಂದೂ, ವಿಜಯಾದಿತ್ಯನ ಮೊಮ್ಮಗನೆಂದೂ ತಿಳಿಸಿದೆ. ಮೇಲೆ ನೋಡಿದಂತೆ ವಿಜಯಾದಿತ್ಯನಿಗೆ ರಣವಿಕ್ರಮನೆಂಬ ಹೆಸರೂ ಇದ್ದುದರಿಂದ ಅವನ ಮೊಮ್ಮಗನಿಗೂ ಅದೇ ಹೆಸರನ್ನಿಟ್ಟಿರುವುದು ಸಂಭವನೀಯ. ಇದನ್ನು ಬಿಟ್ಟರೆ ಗಳಿಗೇಕೆರೆ ಶಾಸನವನ್ನು ಕೂಟಶಾಸನವೆಂದು ಕರೆಯಲು ಬೇರೆ ಯಾವ ಆಧಾರವೂ ಇಲ್ಲ; ಈ ಆಕ್ಷೇಪಣೆ ಅಷ್ಟು ಗುರುತರವಾದುದೇನೂ ಅಲ್ಲ.

ಕೊಜ್ಗಣಿ ಮುತ್ತರಸನ ಎಂದರೆ ಶ್ರೀಪುರುಷನ, ಮಗ ಇಮ್ಮಡಿ ಶಿವಮಾರನ ಆಳಿಕೆಗೆ ಸೇರಿದ ವಿಜಯಪುರದ ತಿನ ೧೪೫ನೆಯ ಶಾಸನವು ಮಣಲೆ ಅರಸನು ಕೊಂಬಡಿ, ಕಿಟಿಲೆನಾಡುಗಳನ್ನೂ ಕುಳತ್ತೂರಿನ ಪೆಡೆದಿಯೂ ಕಿಱುವೆಟ್ಟಿಗರ ವನ್ನೂ ಆಳುತ್ತಿದ್ದಾಗ ಕಿಱುವೆಟ್ಟಿಗರದ ಪನ್ನಿರ್ವ್ವರಿಗೆ ಪತ್ತೊಂದಿ ಬಿಟ್ಟುದನ್ನು ತಿಳಿಸುತ್ತದೆ. ತಿನ ೧೪೬ ಅದೇ ವಿಜಯಪುರದಲ್ಲಿರುವ ಸು. ೯ ನೆಯ ಶತಮಾನದ ಲಿಪಿಯಲ್ಲಿ ಕಂಡರಿಸಿರುವ ಎಱೆಯಪ್ಪನ ಆಳಿಕೆಗೆ ಸೇರಿದ ಶಾಸನ. ನರಸಿಂಹಾಚಾರ್ಯರು ಈ ಶಾಸನವನ್ನು ಇಮ್ಮಡಿ ಶಿವಮಾರನ ಮಗ ಎಱೆಯಪ್ಪ (ಮಾರಸಿಂಹ ಎಱೆಯಪ್ಪ)ನ ಕಾಲಕ್ಕೆ ಅನ್ವಯಿಸಿದ್ದಾರೆ.[2] ಶೌಚಮಣಲೆಯ ಮತ್ತು ನನ್ನಿಮಳಲೂರರು ರಣಪಾರ ಮತ್ತು ಮಣಲೆಯರಸರ ಆಪ್ಪಣೆಪಡೆದು ಕಿಱುವೆಟ್ಟಿಗರದ ಪನ್ನಿರ್ವ್ವರಿಗೆ ಹೊನ್ನುಕೊಟ್ಟು ಒಕ್ಕಲು ನೆಲೆಗೊಳಿಸಿದುದನ್ನು ಇದು ವಿವರಿಸುತ್ತದೆ. ಹಿಂದಿನ ಶಾಸನದಲ್ಲಿ ಬರುವ ಮಣಲೆ ಅರಸನೂ ಈ ಶಾಸನದ ಮಣಲೆಯರಸನೂ ಒಬ್ಬನೇ ಆಗಿರಬೇಕೆಂದು ನಿರ್ಧರಿಸಿ ನರಸಿಂಹಾಚಾರ್ಯರು ಈ ಶಾಸನದ ಎಱೆಯಪ್ಪನನ್ನು ಇಮ್ಮಡಿ ಶಿವಮಾರನ ಮಗ ಮಾರಸಿಂಹ ಎಱೆಯಪ್ಪನೇ ಎಂದು ಗೊತ್ತುಪಡಿಸಿದ್ದಾರೆ. ಇದರೊಂದಿಗೆ ಈ ಶಾಸನದಲ್ಲಿ ಬರುವ ರಣಪಾರನು ಕೂಡಲೂರು ಶಾಸನದ[3] ರಣಪಾಕರಸನೇ ಇರಬೇಕು ಎನ್ನುತ್ತಾರೆ. ಆದರೆ ಅಲ್ಲಿ ರಣಪಾಕರಸನು ಆಳುತ್ತಿದ್ದಂತೆ ತಿಳಿಸಿದರೆ ಈ ಶಾಸನದ ರಣಪಾರನು ಕೇವಲ ಒಬ್ಬ ಅಧೀನ ಅಧಿಕಾರಿಯಾಗಿದ್ದ ನೆಂದು ತೋರುತ್ತದೆ. ಎರಡು ಶಾಸನಗಳಲ್ಲಿ ಬರುವ ಮಣಲೆ ಅರಸ ಮತ್ತು ಮಣಲೆಯರಸ ಒಬ್ಬನೇ ಆಗಿರಲಾರ. ಇವರು ಆಯಾ ರಾಜರ ಅಧೀನದಲ್ಲಿ ಆಳುತ್ತಿದ್ದ, ಮಣಲೆವಂಶಕ್ಕೆ ಸೇರಿದ ಸಾಮಂತ ಅಧಿಕಾರಿಗಳಾಗಿದ್ದಿರಬೇಕು.

ಇಲ್ಲಿ ಮುಖ್ಯವಾದ ಇನ್ನೊಂದು ವಿಷಯವಿದೆ. ಮಾರಸಿಂಹ ಎಱೆಯಪ್ಪನು ಆಳುತ್ತಿದ್ದುದಕ್ಕೆ ಯಾವ ದಾಖಲೆಯೂ ಇಲ್ಲ. ಈಗ ದೊರೆತಿರುವ ಅವನ ಶಾಸನಗಳಲ್ಲೆಲ್ಲ ಅವನನ್ನು ಯುವರಾಜನೆಂದೇ ಹೇಳಿದೆ. ಅವನು ತನ್ನ ತಂದೆಯ ಜೀವಿತಕಾಲದಲ್ಲಿಯೇ ತೀರಿಕೊಂಡಿದ್ದಿರಬೇಕೆಂದು ಊಹಿಸಲವಕಾಶವಿದೆ, ಮತ್ತು ಆ ಶಾಸನಗಳಲ್ಲೆಲ್ಲಾ ಅವನನ್ನು ಮಾರಸಿಂಹ ಎಱೆಯಪ್ಪ ಎಂದೇ ಕರೆದಿದೆ. ಆದ್ದರಿಂದ ಈ ಶಾಸನದ ಎಱೆಯಪ್ಪನು ಒಂದನೆಯ ರಾಚಮಲ್ಲನ ಮಗ ನೀತಿಮಾರ್ಗ ಎಱೆಗಂಗನಾಗಿರುವುದು ಹೆಚ್ಚು ಸಂಭವನೀಯ. ನರಸಿಂಹಾಚಾರ್ಯರು ಈ ಶಾಸನದ ಕಾಲವನ್ನು ಸು. ಕ್ರಿ.ಶ. ೮೦೦ ಎನ್ನುತ್ತಾರೆ. ಆದರೆ ಮೇಲೆ ಹೇಳಿದ ಕಾರಣಗಳಿಂದ ಅದನ್ನು ಸು. ೮೫೦ರ ಕಾಲಕ್ಕೆ ಮುಂದೂಡಬಹುದು.

ದೊಡ್ಡಹುಂಡಿ ಶಾಸನವನ್ನು (ತಿನ ೨೫೭) ಡಾ. ಫ್ಲೀಟ್ ಅವರೂ ಸಂಪಾದಿಸಿ ಪ್ರಕಟಿಸಿದ್ದಾರೆ.[4] ಫ್ಲೀಟ್ ಅವರ ಪಾಠದಲ್ಲಿ ಹೆಚ್ಚಿನ ಬದಲಾವಣೆ ಕಂಡುಬರುವುದು ೬, ೯, ೧೦ನೆಯ ಸಾಲುಗಳಲ್ಲಿ. ೬ನೆಯ ಸಾಲನ್ನು ರೈಸ್ '' ನಡಿಗಳ ಸು(ಶು)ಪುತ್ರ ಸತ್ಯವಾಕ್ಯ ಪೆರ್ಮ್ಮಾನಡಿಗಳ್ಗುಟ್ಟಿ '' ಎಂದು ಸತ್ಯವಾಕ್ಯ ಪೆರ್ಮಾನಡಿಯು ಸುಪುತ್ರನಾಗಿದ್ದ ಎಂಬ ಅರ್ಥದಲ್ಲಿ ಓದಿದ್ದರೆ, ಫ್ಲೀಟ್ ಅದನ್ನು '' ಅಗ್ಗಪುತ್ರ '' ಎಂದು ಓದಿ ಅವನನ್ನು ಹಿರಿಯ ಮಗನೆಂದು ಪರಿಗಣಿಸಿದ್ದಾರೆ. ಮುಂದೆ, ೯, ೧೦ನೆಯ ಸಾಲುಗಳಲ್ಲಿ ರೈಸ್ '' ಕೊಟ್ಟದು ಕಪ್ಪಹಳ್ಳಿ '' ಎಂದು ಓದಿರುವುದನ್ನು ಫ್ಲೀಟ್ '' ಕೊಟ್ಟದು ಗಚ್ಛಂ ಮಾಡಿ '' ಎಂದು ಓದಿದ್ದಾರೆ. ನಾವು ಮೂಲಶಾಸನದ ಪ್ರತಿಯನ್ನು ಪರೀಕ್ಷಿಸಿದ್ದೇವೆ. ಅದರಲ್ಲಿ ' ಶುಪುತ್ರ ' ಎಂದೇ ಇದ್ದು ಫ್ಲೀಟ್ ಅವರ ' ಅಗ್ಗಪುತ್ರ ' ಎಂಬ ಪಾಠ ಸರಿಯಲ್ಲ ಎಂಬುದು ಸ್ಪಷ್ಟವಾಗುತ್ತದೆ. ಹಾಗೆಯೇ ೯, ೧೦ನೆಯ ಸಾಲುಗಳಲ್ಲಿ '' ಕಪ್ಪಹಳ್ಳಿ '' ಎಂಬುದನ್ನು ಫ್ಲೀಟ್ '' ಗಚ್ಛಂ ಮಾಡಿ '' ಎಂದು ಓದಿ ಪೂರ್ತಿಯಾಗಿ ಬೇರೆ ಅರ್ಥವನ್ನೇ ಮಾಡಿದ್ದಾರೆ. ಆದರೆ ೧೦ನೆಯ ಸಾಲಿನಲ್ಲಿರುವ '' ಪ್ಪಹಳ್ಳಿ '' ಎಂಬುದನ್ನು ಬೇರೆ ರೀತಿ ಓದಲು ಸಾಧ್ಯವಿಲ್ಲ. ಅದು ಒಂದು ಹಳ್ಳಿಯ ಹೆಸರೆಂಬುದು ಸ್ಪಷ್ಟ; ರೈಸ್ ಅದನ್ನು ಕಪ್ಪಹಳ್ಳಿ ಎಂದಿದ್ದಾರೆ. '' ಕ '' ಕಾಣಿಸುವುದಿಲ್ಲ.

[1] ಇ ಐ., V, p. 140

[2] ಎಂಎಆರ್., 1912 p. 36–37

[3] ಅದೇ

[4] ಇ ಐ., VI, p. 41–45

ಆದರೂ ಅವರ ಪಾಠವನ್ನು ಒಪ್ಪಿಕೊಳ್ಳಬಹುದು. ಆದರೆ ೧೭ರಿಂದ ೨೧ರ ವರೆಗಿನ ಸಾಲುಗಳನ್ನು ಓದಿರುವುದರಲ್ಲಿ ಅರ್ಥ ಸ್ಪಷ್ಟವಿಲ್ಲದಿದ್ದರೂ ರೈಸ್ ಅವರ ಪಾಠಕ್ಕಿಂತ ಫ್ಲೀಟ್ ಅವರ ಪಾಠ ಹೆಚ್ಚು ಸಮರ್ಪಕ.

ರೈಸ್‌ರವರು ಈ ಶಾಸನದ ಕಾಲ ಸು. ಕ್ರಿ. ಶ. ೮೬೫ ಎಂದು ಸೂಚಿಸಿ[1] ಶಾಸನದಲ್ಲಿ ಗತಿಸಿದನೆಂದು ಹೇಳಲಾದ ದೊರೆ ನೀತಿಮಾರ್ಗ ಎಱೆಗಂಗನೆಂದು ಗುರುತಿಸಿದ್ದಾರೆ.[2] ಆದರೆ ಅವನು ಸಾಯುವಾಗ ಅವನ ಬಳಿ ಇದ್ದ ಅವನ ಮಗ ಸತ್ಯವಾಕ್ಯನು ರಾಜ್ಯವಾಳಲಾರಂಭಿಸಿದುದು ೮೭೦ರಲ್ಲಿ.[3] ದೊಡ್ಡಹುಂಡಿ ಶಾಸನವನ್ನು ನೀತಿಮಾರ್ಗ ಎಱೆಗಂಗನು ತೀರಿಕೊಂಡನಂತರ, ಸತ್ಯವಾಕ್ಯ ಇಮ್ಮಡಿ ರಾಜಮಲ್ಲನ ಆಳಿಕೆ ಆರಂಭವಾದ ಮೇಲೆ, ಎಂದರೆ ಕ್ರಿ. ಶ. ೮೭೦ರ ಸುಮಾರಿನಲ್ಲಿ, ಹಾಕಿಸಿರಬೇಕು. ಶಾಸನದಲ್ಲಿ ಬರುವ 'ಮನೆಮಗತ್ತಿನ' ಎಂಬುದನ್ನು ನಾವು ಮನೆಯ ಸೇವಕ ಎಂದು ಅರ್ಥೈಸಿದ್ದೇವೆ. ಇದು ಬಾಣನು ಹರ್ಷಚರಿತದಲ್ಲಿ ಉಪಯೋಗಿಸಿರುವ ಕುಲಪುತ್ರ ಎಂಬ ಪದಕ್ಕೆ ಸಮಾನವಾದ ಕನ್ನಡ ಪದವೆಂದು ಚಿದಾನಂದಮೂರ್ತಿಗಳು ಅಭಿಪ್ರಾಯಪಟ್ಟಿದ್ದಾರೆ.[4] ಆ ಕಾಲದಲ್ಲಿದ್ದ ಊಳಿಗಪದ್ಧತಿಯಲ್ಲಿ ಸೇವಕರನ್ನು ಮನೆಯವರಂತೆಯೇ ಕಾಣಲಾಗುತ್ತಿದ್ದು ಅವರು ತಮ್ಮ ಸ್ವಾಮಿಗಾಗಿ ಜೀವವನ್ನೇ ಮುಡಿಪಾಗಿಡುತ್ತಿದ್ದರು.

ದೊಡ್ಡಬಾಗಿಲಲ್ಲಿರುವ ತಿನ ೧೨೩ ಬಹುಮಟ್ಟಿಗೆ ತ್ರುಟಿತವಾದ ತುಂಡುಶಾಸನ. ಇದರಲ್ಲಿ ನೊಳಂಬಾಂತಕ ಪೆರ್ಮ್ಮಾನಡಿ, ವಿಕ್ರಮಾದಿತ್ಯ ಮತ್ತು ಉದಯಾದಿತ್ಯರ ಹೆಸರುಗಳಿವೆ. ಇಲ್ಲಿ ತಿಳಿಸಿರುವ ನೊಳಂಬಾಂತಕನು ಇಮ್ಮಡಿ ಮಾರಸಿಂಹನೆಂದೂ ಕ್ರಿ. ಶ. ೯೭೪ರಲ್ಲಿ ಅವನು ತೀರಿಕೊಂಡಾಗ ಪತ್ತಿಬಿಟ್ಟ ವಿಷಯವನ್ನು ಇದು ತಿಳಿಸುತ್ತದೆಂದೂ ರೈಸ್ ಅಭಿಪ್ರಾಯಪಡುತ್ತಾರೆ.[5] ಆದರೆ ಮೂಲವನ್ನು ಪರೀಕ್ಷಿಸಿದಾಗ ಇದು ೯ನೆಯ ಶತಮಾನಕ್ಕಿಂತ ಈಚಿನದಾಗಲಾರದೆಂಬುದು ಸ್ಪಷ್ಟಪಡುತ್ತದೆ. ಅಲ್ಲದೆ ನೊಳಂಬಾಂತಕ ಪೆರ್ಮ್ಮಾನಡಿಯ ಸಾವನ್ನು ಇದು ಸೂಚಿಸುವಂತೆ ತೋರುತ್ತದೆ. ರೈಸ್ ಅವರು ಆ ಶಾಸನವು ಇಮ್ಮಡಿ ಮಾರಸಿಂಹನದೆಂದು ಭಾವಿಸಲು ನೊಳಂಬಾಂತಕ ಎಂಬ ಬಿರುದು ಬಹುಶಃ ಪ್ರೇರಕವಾಗಿರಬಹುದು. ಆದರೆ ಒಂದನೆಯ ಬೂತುಗನ ಮಗ ನೀತಿಮಾರ್ಗ ಎಱೆಯಪ್ಪನು ತನ್ನ ಚಿಕ್ಕಪ್ಪ ಇಮ್ಮಡಿ ರಾಚಮಲ್ಲನ ಜೊತೆಗೂಡಿ ಆಳುತ್ತಿದ್ದಾಗ ನೊಳಂಬ ಮಹೇಂದ್ರನನ್ನು ಹಲವು ಬಾರಿ ಸೋಲಿಸಿದುದು ಮತ್ತು ಕ್ರಿ. ಶ. ೮೯೫–೯೭ರ ಸುಮಾರಿನಲ್ಲಿ ಅವನನ್ನು ಕೊಂದುದು ವೇದ್ಯವೇ ಇದೆ. ಇದರ ಫಲವಾಗಿ ಎಱೆಯಪ್ಪನೂ ನೊಳಂಬಾಂತಕ ಎಂಬ ಬಿರುದನ್ನು ಹೊಂದಿರಬಹುದಾದ ಸಾಧ್ಯತೆ ಇದೆ. ಇದು ಇದುವರೆಗೆ ಗಮನಕ್ಕೆ ಬಾರದಿದ್ದ ವಿಷಯ.

ಆದ್ದರಿಂದ ಈ ಶಾಸನವನ್ನು ಇಮ್ಮಡಿ ನೀತಿಮಾರ್ಗ ಎಱೆಯಪ್ಪನದೆಂದು ಪರಿಗಣಿಸಿ ಕಾಲವನ್ನು ೮೯೫–೯೭ರ ರಿಂದೀಚೆಗೆ ೯೦೦ರ ಒಳಗಿನದೆಂದಿಟ್ಟುಕೊಳ್ಳಬಹುದು. ಕವಿ ಗುಣವರ್ಮನು ಉಲ್ಲೇಖಿಸುವ ಮಹೇಂದ್ರಾಂತಕನು ಈ ಎಱೆಯಪ್ಪನೇ ಎಂದು ಗುರುತಿಸಿರುವುದನ್ನು ಗಮನಿಸಬೇಕು. ಆದ್ದರಿಂದ ಪ್ರಕೃತ ಶಾಸನದ ನೊಳಂಬಾಂತಕನೇ ಗುಣವರ್ಮನ ಮಹೇಂದ್ರಾಂತಕನೆಂದೆನ್ನಬಹುದು.

ಕ್ರಿ. ಶ. ೯೩೮ರ ಶಾಸನದಿಂದ (ತಿನ ೨೦೦) ಆಗ ತಱೆಕಾಡು ಎಂದು ಕರೆಯಲಾಗುತ್ತಿದ್ದ ತಲಕಾಡಿನ ಆಡಳಿತವನ್ನು ಮಹಾನಗರವೆಂಬ ಒಂದು ಸಂಘವು ನಡೆಸುತ್ತಿತ್ತೆಂದು ತಿಳಿದುಬರುತ್ತದೆ. ಈ ಮಹಾನಗರವೂ, ಇಪ್ಪತ್ತ ಅಯ್ವರು ಮತ್ತು ಪಟ್ಟಣವಸಂತರ ಮಂಚಯ್ಯನೂ ಕೆರೆಯ ದುರಸ್ತಿಗಾಗಿ ದ್ರವ್ಯವನ್ನು ಕೊಟ್ಟುದನ್ನು ಶಾಸನ ತಿಳಿಸುತ್ತದೆ. ಪಟ್ಟಣವಸಂತರ ಎಂಬುದರ ಅರ್ಥ ಸ್ಪಷ್ಟವಾಗಿಲ್ಲ. ಪಟ್ಟಣಸ್ವಾಮಿ ಎಂಬಂತೆ ಇದು ಒಂದು ಅಧಿಕಾರವನ್ನು ಸೂಚಿಸುತ್ತದೆಯೆ? ಈ ಶಾಸನ ಎಱೆಯಪ್ಪನ ಮಗ ನೀತಿಮಾರ್ಗಪೆರ್ಮಾನಡಿ, ಎಂದರೆ ಮುಮ್ಮಡಿ ರಾಚಮಲ್ಲನ ಆಡಳಿತಕ್ಕೆ ಸೇರಿದುದು. ಎಱೆಯಪ್ಪನನ್ನು ಒಂದನೆಯ ಬೂತುಗನ ಮಗ ಇಮ್ಮಡಿ ಎಱೆಯಪ್ಪನೆಂದು ನರಸಿಂಹಾಚಾರ್ಯರು ಸೂಚಿಸಿದ್ದಾರೆ. ಆದರೆ ಇದು ಕಾಲಾನುಪೂರ್ವಿಗೆ ವಿರೋಧವಾಗುತ್ತದೆ

ಹಳೇಬೋಗಾದಿಯ ಶಾಸನ (ವೈ ೨೨೨) ಹತ್ತನೆಯ ಶತಮಾನದ ಒಂದು ಅಪೂರ್ಣ ಶಾಸನ. ಇದರಲ್ಲಿ ಮಾರಸಿಂಗವರ್ಮ್ಮ ಮತ್ತು ಅಕಾಲವರ್ಷರ ಹೆಸರುಗಳಿವೆ. ಈ ಅಕಾಲವರ್ಷನು ರಾಷ್ಟ್ರಕೂಟ ಮುಮ್ಮಡಿ ಕೃಷ್ಣನಾಗಿದ್ದು ಮಾರಸಿಂಗವರ್ಮ್ಮನು ಇಮ್ಮಡಿ ಮಾರಸಿಂಹನಾಗಿರಬೇಕು.

---

1 *Mysore and Coorg from Inscriptions* (1909), p. 186
2 ಅದೇ, ಪು. 43
3 ಅದೇ, ಪು. 50 ರಲ್ಲಿನ ೧೩–೧೪ನೆಯ ಪಟ್ಟಿಗಳು
4 ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಪು. 306-07
5 ರೈಸ್‌ರವರ ಮೇಲೆ ಹೇಳಿದ ಗ್ರಂಥ, ಪು. 14

ಬಸವನಹಳ್ಳಿಯಲ್ಲಿರುವ ತಿನ ೩೨೦ ಸತ್ಯವಾಕ್ಯಪೆರ್ಮಾನಡಿಯ ಆಳಿಕೆಯ ೬ನೆಯದ ವರ್ಷ ವಿಭವಸಂವತ್ಸರಕ್ಕೆ ಸೇರಿದುದು. ಇದು ೧೦ನೆಯ ಶತಮಾನದ ಲಿಪಿಯಲ್ಲಿದೆ. ವಿಭವ ಸಂವತ್ಸರವು ಕ್ರಿ. ಶ. ೮೪೮, ೯೦೮ ಮತ್ತು ೯೬೮ರಲ್ಲಿ ಬಂದಿದ್ದಿತು. ಕ್ರಿ. ಶ. ೮೪೮ರಲ್ಲಿ ಇಮ್ಮಡಿ ಎಱೆಗಂಗನು ಆಳುತ್ತಿದ್ದನು. ಆದರೆ ಅವನಿಗೆ ನೀತಿಮಾರ್ಗನೆಂಬ ಬಿರುದಿದ್ದಿತೇ ಹೊರತು ಸತ್ಯವಾಕ್ಯನೆಂದಲ್ಲ. ಎಂ. ಎಚ್. ಕೃಷ್ಣ ಅವರು ಈ ಶಾಸನವು ಇಮ್ಮಡಿ ರಾಚಮಲ್ಲನದಾಗಿರಬೇಕೆನ್ನುತ್ತಾರೆ. ಆದರೆ ಈತನು ಕ್ರಿ. ಶ. ೮೬೦ರಲ್ಲಿಯೇ ಪಟ್ಟಕ್ಕೆ ಬಂದಿದ್ದರಿಂದ ೯೭೮ ಈತನ ೬ನೆಯ ಆಳಿಕೆಯ ವರ್ಷ ಆಗಲಾರದು. ಇಲ್ಲಿ ಸೂಚಿತನಾಗಿರುವ ರಾಜನು ಬಹುಶಃ ಇಮ್ಮಡಿ ಮಾರಸಿಂಹನೇ ಆಗಿದ್ದು, ಅವನ ಆಳಿಕೆಯ ೬ನೆಯ ವರ್ಷವು ಕ್ರಿ. ಶ. ೯೬೮–೬೯ಕ್ಕೆ ಸರಿಹೊಂದುತ್ತದೆ.

ಕೃನ ೪೧ ಚಿಕ್ಕಹನಸೋಗೆಯಲ್ಲಿರುವ ಬಹುಮಟ್ಟಿಗೆ ತ್ರುಟಿತವಾಗಿರುವ ವೀರಗಲ್ಲು ಶಾಸನ. ಕೋಗಿಯೂರಿನ ಯುದ್ಧದಲ್ಲಿ ಹೋರಾಡಿ ಮಡಿದ ಗಂಗವಂಶದ ವೀರನೊಬ್ಬನ ಪರಾಕ್ರಮವನ್ನು ವರ್ಣಿಸುವ ಈ ಶಾಸನದಲ್ಲಿ ಅದಕ್ಕಾಗಿ ಗೋವಿನ್ದರ ಮತ್ತು ಸಾಸಿರ್ವರು ಕಲ್ನಾಡು ಕೊಟ್ಟುದನ್ನು ತಿಳಿಸಿದೆ. ಈ ಶಾಸನವನ್ನು ನರಸಿಂಹಾಚಾರ್ಯರು ಒಂದನೆಯ ಬೂತುಗನ ಮಗ ಎಱೆಯಪ್ಪನ ಕಾಲಕ್ಕೆ, ಎಂದರೆ ಸುಮಾರು ೯೦೦ಕ್ಕೆ ಒಯ್ಯುತ್ತಾರೆ. ಆದರೆ ಇದು ೧೦ನೆಯ ಶತಮಾನದ ಲಿಪಿಯಲ್ಲಿದ್ದು ಇದರಲ್ಲಿ ದಾನ ಕೊಟ್ಟವರಲ್ಲಿ ಗೋವಿನ್ದರನ ಹೆಸರೂ ಇರುವುದರಿಂದ ಇವನ್ನು ಒಪ್ಪುವುದು ಕಷ್ಟ.

## ಚಾಲುಕ್ಯರು

ಈ ಸಂಪುಟದಲ್ಲಿನ ಸುಮಾರು ಹನ್ನೆರಡು ಶಾಸನಗಳು ಚಾಲುಕ್ಯವಂಶದ ಮೂವರು ಸಾಮಂತ ರಾಜರನ್ನು ಕುರಿತದ್ದಾಗಿವೆ. ಅವರನ್ನು ಚಾಲುಕ್ಯವಂಶೋದ್ಭವರೆಂದೂ, ಆದಿವರಾಹಲಾಂಛನರೆಂದೂ ವರ್ಣಿಸಿದೆ. ಅವರು ಮಹಾಸಾಮಂತ ನರಸಿಂಗ, ದುಗ್ಗ ಮತ್ತು ಗೊಗ್ಗಿ. ವರುಣದಲ್ಲಿರುವ ತ್ರುಟಿತವಾದ ವೈ ೧೬೭ ನೆಯ ಶಾಸನದಲ್ಲಿ ನರಸಿಂಗ ಮತ್ತು ಅವನ ಸತಿ ಗಾವಿಲಬ್ಬರಸಿಯ ಹೆಸರುಗಳಿವೆ. ಈ ಸಾಮಂತನೇ ನರಸಿಂಗೇಶ್ವರ ದೇವಾಲಯವನ್ನು ಕಟ್ಟಿಸಿದುದಾಗಿ ತಿಳಿಸುವ ಕುಕ್ಕರಹಳ್ಳಿ ಶಾಸನವು (ವೈ ೨೨೩) ಅವನನ್ನು ಅಭಿಮಾನವಾಮನ, ಚಾಲುಕ್ಯಾರ್ಜುನ, ಆಹವನಿರ್ಭಯ ಎಂದು ಮೊದಲಾಗಿ ವರ್ಣಿಸುತ್ತದೆ. ಅಯ್ಯನಚಕ್ರ, ಅಯ್ಯನ್ನವರಕೋಟಿ, ಮಾವನಕೇಸರಿ ಮುಂತಾದ ಬಿರುದುಗಳನ್ನು ಹೊಂದಿದ್ದ ಮಹಾಸಾಮಂತ ದುರ್ಗನು ಬೂತೇಶ್ವರದೇವರಿಗೆ ಗ್ರಾಮ ಮತ್ತು ಭೂಮಿಗಳನ್ನು ದಾನಮಾಡಿ ನನ್ನಿಕರ್ತಾರಭಟಾರರಿಗೆ ಧಾರೆ ಎರೆದುದನ್ನು ವರುಣದಲ್ಲಿರುವ ವೈ ೧೬೮ ತಿಳಿಸುತ್ತದೆ. ಈ ಶಾಸನದ ಲಿಪಿಯನ್ನೇ ಹೋಲುವ ವರುಣದ ಹತ್ತಿರದ ವರಕೋಡಿನಲ್ಲಿ ಹೊಸದಾಗಿ ದೊರೆತಿರುವ ಶಾಸನವು (ವೈ ೧೫೯) ದುರ್ಗನ ಅರಸಿ ಪಿಟ್ಟಬ್ಬೆಯ ಸ್ಮಾರಕಕ್ಕಾಗಿ ನಿಲ್ಲಿಸಿದ ನಿಸಿಧಿ. ಈ ದುರ್ಗನು ಹಿಂದೆ ತಿಳಿಸಿರುವವನೇ ಇರಬೇಕು. ದುರ್ಗನು ಶಿವಭಕ್ತನಾಗಿರುವಾಗ ಅವನ ರಾಣಿ ಜೈನಮತಾವಲಂಬಿಯಾಗಿರುವುದು ಗಮನಿಸಬೇಕಾದ ಅಂಶ. ಇವನಿಂದ ದತ್ತಿಯನ್ನು ಪಡೆದ ನನ್ನಿಕರ್ತಾರಭಟಾರನು ಬೂತೇಶ್ವರದೇವಾಲಯದ ಆಚಾರ್ಯನಾಗಿರಬೇಕು.

ವರುಣದ ಶಾಸನಗಳಲ್ಲಿ ಕಾಣಿಸಿಕೊಳ್ಳುವ ಮತ್ತೊಬ್ಬ ಚಾಲುಕ್ಯ ಸಾಮಂತನೆಂದರೆ ಗೊಗ್ಗಿ. ಅತನೂ ಬೂತೇಶ್ವರದೇವರಿಗೆ ಒಂದು ಗ್ರಾಮವನ್ನು ದತ್ತಿ ಬಿಟ್ಟು ಅದನ್ನು ನನ್ನಿಕರ್ತಾರಬಟರನಿಗೆ ಒಪ್ಪಿಸಿದ್ದಾನೆ. ಈತ ದುರ್ಗನಿಂದ ದತ್ತಿ ಪಡೆದ ನನ್ನಿಕರ್ತಾರಭಟಾರನೇ ಎಂಬುದು ಸ್ಪಷ್ಟ. ಇಲ್ಲಿನ ಆರು ವೀರಗಲ್ಲುಗಳು ಉತ್ತವಗಳ್ಳ ಮತ್ತು ಎಡವರಿಯರ ನಡುವೆ ನಡೆದ ದಾಯಿಗ ಸಂಬಂಧದ ಯುದ್ಧದಲ್ಲಿ ಉತ್ತವಗಳ್ಳನ ಪರವಾಗಿ ಹೋರಾಡಿದ ಹಲವು ವೀರರು ಸತ್ತುದನ್ನು ತಿಳಿಸುತ್ತವೆ. ಈ ವೀರರನ್ನು ಗೊಗ್ಗಿಯ ಮನೆವಗತಿ ಅಥವ ಮನೆಮಗತಿ (ಮನೆಯ ಸೇವಕ) ಎಂದು ಕರೆದಿದೆ. ಪೊಲೆಕೇಸಿಗೂ ಬೂದಿಗನಿಗೂ ನಡೆದ ಯುದ್ಧದಲ್ಲಿ ಪೊಲೆಕೇಸಿಯ ಒಡತಿಯ (ಹೆಂಡತಿ ?) ಕುದುರೆಕಾರನನ್ನು ಕೊಂದು ತಾನೂ ಸತ್ತ ಎಱೆಅಂಗನಿಗಾಗಿ ನಿಲ್ಲಿಸಿದ ವೀರಗಲ್ಲು ವೈ ೧೬೬. ಬೂದಿಗನ ಪರವಾಗಿ ಈ ವೀರನು ಕಾದಿದನೆಂಬುದು ಸ್ಪಷ್ಟ.

ಈ ಶಾಸನಗಳ ಪಾಠಗಳಿಗೂ ರೈಸರು ಮೊದಲು ಓದಿದ ಪಾಠಗಳಿಗೂ ಬಹುಮಟ್ಟಿಗೆ ವ್ಯತ್ಯಾಸವಿದೆ. ಇಲ್ಲಿ ಬಂದಿರುವ ಬೂದಿಗ ಎಂಬುದನ್ನು ರೈಸ್ ಬೂತುಗ ಎಂದೆಣಿಸಿ ಪೊಲೆಕೇಸಿಯನ್ನು ಇಮ್ಮಡಿ ತೈಲಪನ ಮಗ ಸತ್ಯಾಶ್ರಯನೆಂದು ಪರಿಗಣಿಸಿದ್ದಾರೆ. ಆದರೆ ಬೂದಿಗನನ್ನು ಗಂಗ ಬೂತುಗನೆಂದು ಪರಿಗಣಿಸಿದಲ್ಲಿ ಕಾಲಾನುಪೂರ್ವಿಯ ತೊಡಕು ಉಂಟಾಗುತ್ತದೆ. ಏಕೆಂದರೆ ಪೊಲೆಕೇಸಿಯು ಸತ್ಯಾಶ್ರಯನೇ ಆದರೆ ಅವನನ್ನು ೧೦ನೆಯ ಶತಮಾನದ ಕಡೆಯ ದಶಕಕ್ಕೆ ಒಯ್ಯಬೇಕು. ಆ ಹೊತ್ತಿಗೆ ಬೂತುಗನು, ಇಮ್ಮಡಿ ಬೂತುಗನೆಂದಿಟ್ಟುಕೊಂಡರೂ, ಜೀವಂತವಾಗಿರಲಿಲ್ಲ. ಪೊಲೆಕೇಸಿಯೇ ಸತ್ಯಾಶ್ರಯನೆನ್ನುವುದಕ್ಕೆ ಕೊಟ್ಟ ಆಧಾರಗಳು ತೃಪ್ತಿಕರವಾಗಿಲ್ಲ.

ಗೊಗ್ಗಿಯು ಚಾಲುಕ್ಯವಂಶದ ಒಂದು ಶಾಖೆಗೆ ಸೇರಿದ್ದನೆಂಬುದು ನಿಸ್ಸಂದೇಹ. ಗೊಗ್ಗಿ, ದುರ್ಗ, ನರಸಿಂಹರು ಒಂದೇ ವಂಶಕ್ಕೆ ಸೇರಿರುವುದು ನಿಶ್ಚಿತವಾದರೂ ಅವರವರ ಸಂಬಂಧ ಎಂತಹುದೆಂಬುದು ತಿಳಿಯದು. ಈ ಶಾಸನಗಳನ್ನೆಲ್ಲ ೧೦ನೆಯ ಶತಮಾನದ ೫೦ ವರ್ಷಗಳ ಅವಧಿಯವೆಂದಿಟ್ಟುಕೊಳ್ಳಬಹುದು. ಈ ಸಂಬಂಧದಲ್ಲಿ ಸೇವುಣರ ಶಾಸನಗಳಲ್ಲಿ ಕಾಣಿಸಿಕೊಳ್ಳುವ ಸೇವುಣ ವೇಸುಗಿಯ ಮಾವ ಗೊಗ್ಗಿರಾಜನನ್ನು ಅದೇ ಹೆಸರಿನ ಶಿಲಾಹಾರ, ಲಾಟದೇಶದ ಚಾಲುಕ್ಯ ಅಥವ ವರುಣದ ಶಾಸನದಲ್ಲಿ ಬರುವ ಚಾಲುಕ್ಯ ಗೊಗ್ಗಿ ಆಗಿರಬಹುದೆಂದು ಕೆಲವು ವಿದ್ವಾಂಸರು ಭಾವಿಸಿರುವುದನ್ನು ನೆನೆಯಬಹುದು.[1]

ಕಾಲಗಣನೆಯಲ್ಲಿ ವ್ಯತ್ಯಾಸವಿರುವುದರಿಂದ ಗೊಗ್ಗಿರಾಜನು ಶಿಲಾಹಾರವಂಶದ ಅದೇ ಹೆಸರಿನ ರಾಜನಾಗಿರುವ ಸಾಧ್ಯತೆ ಇಲ್ಲ. ಹಾಗೆಯೇ ಲಾಟದೇಶದ ಬಾರಪ್ಪನ ಮಗ ಗೊಗ್ಗಿಯ ವಿಷಯದಲ್ಲಿಯೂ ಅದು ಕೇವಲ ನಾಮಸಾಮ್ಯದ ಮೇಲೆ ಆಧಾರಿತವಾಗಿರುವುದರಿಂದ ಸಾಧುವಾದುದಲ್ಲವೆಂದೂ ಆದ್ದರಿಂದ ವೇಸುಗಿಯ ಮಾವ ಗೊಗ್ಗಿಯು ಪ್ರಕೃತ ಶಾಸನದ ಗೊಗ್ಗಿಯಾಗಿರಬೇಕೆಂದೂ ಭಾವಿಸಲಾಗಿದೆ. ಗೊಗ್ಗಿರಾಜನು ಕಲ್ಯಾಣದ ಚಾಲುಕ್ಯವಂಶಕ್ಕೆ ಸೇರಿದವನೆಂಬ ಭಾವನೆ ಬರುವಂತೆ ವಿವರಿಸಲಾಗಿದೆ. ಆದರೆ ಈ ಭಾವನೆ ವ್ಯಕ್ತಿಗಳ ಹೆಸರಿನ ಮೇಲಲ್ಲದೆ ಕೇವಲ ವಂಶದ ಎಂದರೆ ಚಾಲುಕ್ಯ ಎಂಬ ಹೆಸರಿನ ಮೇಲೆ ಆಧಾರಿತವಾಗಿರುವುದರಿಂದ ಈ ಊಹೆ ತರ್ಕಬದ್ಧವಾಗಿಲ್ಲ.

ಸುಮಾರು ಇದೇ ಕಾಲದಲ್ಲಿಯೇ ಕದಂಬಳಿಗೆ-೧೦೦೦ವನ್ನು (ಕ್ರಿ. ಶ. ೯೬೮ರಲ್ಲಿ) ಚಾಲುಕ್ಯ ವಂಶದ ಪಂದಿಗನೆಂಬ ಸಾಮಂತನು ಆಳುತ್ತಿದ್ದನು.[2] ಇದನ್ನು ತಿಳಿಸುವ ಶಾಸನದಲ್ಲಿ ವಂಶಾವಳಿಯನ್ನು ಹೀಗೆ ಕೊಟ್ಟಿದೆ: ಪಂದಿಗನ ತಂದೆ ಶೂದ್ರಕ ಮತ್ತು ತಾತ ಗೊಗ್ಗಿ. ಒಂದು ವರ್ಷದ ನಂತರದ ಗುಂಡೇರಿಯ ಶಾಸನವು[3] ಇದೇ ನಾಡನ್ನು ಶೂದ್ರಕಯ್ಯನು ಶಕ ೮೯೧, ಎಂದರೆ ಕ್ರಿ. ಶ. ೯೬೯ರಲ್ಲಿ ಆಳುತ್ತಿದ್ದುದನ್ನು ತಿಳಿಸುತ್ತದೆ. ಶೂದ್ರಕ ಮತ್ತು ಪಂದಿಗನು ಒಬ್ಬನೇ ವ್ಯಕ್ತಿಯಾಗಿರಬೇಕೆಂದು ರೈಸ್ ಭಾವಿಸುತ್ತಾರೆ.[4] ಹಾಗಿದ್ದಲ್ಲಿ ಗೊಗ್ಗಿಯು ಶೂದ್ರಕ, ಎಂದರೆ ಪಂದಿಗನ ತಂದೆಯಾಗಿದ್ದು ಅವನ ಕಾಲವು ೧೦ನೆಯ ಶತಮಾನದ ಮಧ್ಯಭಾಗವಾಗುತ್ತದೆ. ಈ ಗೊಗ್ಗಿಯೂ ವರುಣದ ಶಾಸನದಲ್ಲಿ ಬರುವ ಗೊಗ್ಗಿಯೂ ಒಬ್ಬನೇ ಎಂದು ಹೇಳಲು ಆಧಾರವಿಲ್ಲ. ವರುಣದ ಗೊಗ್ಗಿಯು ವೇಸುಗಿಯ ಮಾವನಿರಬಹುದೆಂಬ ಸೂಚನೆಯನ್ನೂ ಒಪ್ಪಲಾಗುವುದಿಲ್ಲ.

## ನೊಳಂಬರು

ಮೈ ೧೮೯ನೆಯ ಶಾಸನದಲ್ಲಿ ವೇಳೆವಡಿಯೆಂದು ವರ್ಣಿಸಲಾದ ಅರಸಿಗನ ಮಯ್ಯುನನು ತನ್ನ ಸ್ವಾಮಿಯಾದ ರಕ್ಕಸನೊಳಂಬ ಪಲ್ಲವಾಭರಣ ಪಾಳಿಗನಿಗಾಗಿ ಪ್ರಾಣವ ಮುಡಿಪಿದುದಾಗಿ ಹೇಳಿದೆ. ಸುಮಾರು ೧೧ನೆಯ ಶತಮಾನದ ಈ ಶಾಸನದಲ್ಲಿ ಮಡಿದ ವೀರನ ಹೆಸರು ಲಭ್ಯವಾಗಿಲ್ಲ. ಶಾಸನೋಕ್ತ ಪಾಳಿಗನು ನೊಳಂಬಕುಲಕ್ಕೆ ಸೇರಿದಾತನೆಂಬುದು ಸ್ಪಷ್ಟ. ರಕ್ಕಸನೊಳಂಬ, ಪಲ್ಲವಾಭರಣ ಎಂದು ಬಿರುದಾಂಕಿತನಾದ ಈತನನ್ನು ಗುರುತಿಸುವುದು ಕಷ್ಟ. ೧೧ನೆಯ ಶತಮಾನದ ಮಧ್ಯಭಾಗದ ನಂತರ ನೊಳಂಬರು ಇತಿಹಾಸದಿಂದ ಕಣ್ಮರೆಯಾದರೂ, ನೊಳಂಬರ ಹೆಸರುಗಳನ್ನುಳ್ಳ ಕೆಲವರು ಅಲ್ಲಲ್ಲಿ ಅಧಿಕಾರಿಗಳಾಗಿ ಸೇವೆ ಸಲ್ಲಿಸುತ್ತಿದ್ದುದಾಗಿ ಹೇಳಿದೆ.[5] ಸುಮಾರು ಇದೇ ವೇಳೆಗೆ ಗಂಗ ಹಾಗೂ ಹೊಯ್ಸಳ ಮನೆತನಗಳಲ್ಲಿ ಕ್ರಮವಾಗಿ ರಕ್ಕಸಗಂಗ, ರಕ್ಕಸಪೊಯ್ಸಳ (ವಿನಯಾದಿತ್ಯ) ಎಂಬ ಹೆಸರಿನ ಅರಸರಿದ್ದುದನ್ನು ಸ್ಮರಿಸಬೇಕು. ಅವರಂತೆಯೇ ರಕ್ಕಸನೊಳಂಬ ಪಾಳಿಗನೂ ಒಬ್ಬನಾಗಿರಬಹುದು. ಇವನ ಶಾಸನ ನೊಳಂಬರ ಪ್ರಾಂತದಿಂದ ದೂರ, ದಕ್ಷಿಣದ ಮೈಸೂರು ತಾಲೂಕಿನಲ್ಲಿರುವುದು ಗಮನಾರ್ಹ.

## ಚೋಳರು

ಒಂದನೆಯ ರಾಜರಾಜನ ಶಾಸನಗಳೇ ಈ ಸಂಪುಟದಲ್ಲಿರುವ ಚೋಳರ ಮೊದಲ ಶಾಸನಗಳು. ಅವನ ಮೂರು ಶಾಸನಗಳಿದ್ದು ಎಲ್ಲವೂ ತಿ. ನರಸೀಪುರ ತಾಲ್ಲೂಕಿಗೆ ಸೇರಿವೆ. ಬನ್ನೂರು ಶಾಸನವು (ತಿನ ೫೭) ಹನುಮಂತೇಶ್ವರ

---

[1] S. H. Ritti and B. R. Gopal (Ed) ; *Studies in Indian History and Culture* pp. 226–28

[2] ಎ ಕ., XI ಚಿತ್ರದುರ್ಗ, 74

[3] ಅದೇ, ಹೊಳಲ್ಕೆರೆ 23

[4] ಅದೇ, *Introduction* p. 10

[5] ಕೆ. ಆರ್. ಬಸವರಾಜು (ಸಂ.): ನೊಳಂಬ ಇತಿಹಾಸದರ್ಶನ (1976), ಪು. 23.

ದೇವಾಲಯದ ಸುಕನಾಸಿಯ ದಕ್ಷಿಣಗೋಡೆಯ ಬುಡದಲ್ಲಿದೆ. ರಾಜನ ತಿರುಮಗಳ್‌ಪೋಲ ಪ್ರಶಸ್ತಿಯಿಂದಾರಂಭವಾಗುವ ಈ ಶಾಸನ ಕನ್ನಡದಲ್ಲಿದ್ದು ಪೂರ್ತಿಯಾಗಿ ಕನ್ನಡ ಲಿಪಿಯಲ್ಲಿಯೇ ಇದೆ. ಶಾಸನ ತ್ರುಟಿತವಾಗಿರುವುದಲ್ಲದೆ ಅದರ ಕೆಲವು ಭಾಗ ಅನಂತರ ಕಟ್ಟಿಸಿದ ಕಟ್ಟಡದೊಳಗೆ ಸೇರಿಹೋಗಿದೆ. ರಾಜರಾಜನು ಈ ಪ್ರಶಸ್ತಿಯನ್ನು ತನ್ನ ಆಳಿಕೆಯ ಎಂಟನೆಯ ವರ್ಷದಿಂದೀಚೆಗೆ ಸಾಮಾನ್ಯವಾಗಿ ಉಪಯೋಗಿಸಲಾರಂಭಿಸಿದನು. ಅವನು ಸ್ವತಂತ್ರವಾಗಿ ಆಳಲಾರಂಭಿಸಿದುದು ಸು. ಕ್ರಿ. ಶ. ೯೮೫ರಿಂದ. ಆದ್ದರಿಂದ ಈ ಶಾಸನವನ್ನು ಹಾಕಿಸಿರುವುದು ಕ್ರಿ. ಶ. ೯೯೩ರಿಂದೀಚೆಗೆ ಎಂಬುದು ಖಚಿತ. ಶಾಸನವು ಶ್ರೀಕೊಯಿಲ್ ಎಂದರೆ ದೇವಾಲಯದ ಉಪಗುಡಿಗಳಿಗೆ ಪೂಜೆಗಾಗಿ ಭೂಮಿದಾನ ಮಾಡಿರುವುದನ್ನು ತಿಳಿಸುತ್ತದೆ. ಈ ದೇವಾಲಯದಲ್ಲಿ ದೊರೆತಿರುವ ಶಾಸನಗಳಲ್ಲಿ ಇದೇ ಅತಿಪ್ರಾಚೀನವಾದುದು. ಶಾಸನದ ಕೆಲವು ಭಾಗ ಅನಂತರ ಕಟ್ಟಿಸಿದ ಕಟ್ಟಡದಿಂದ ಮುಚ್ಚಿಹೋಗಿದೆ ಎಂಬುದನ್ನು ಗಮನಿಸಿದರೆ ಲಭ್ಯಶಾಸನವಿದ್ದ ಕಟ್ಟಡದ ಭಾಗವೇ ಅದರಲ್ಲಿ ಉಕ್ತವಾದ ಶ್ರೀಕೊಯಿಲ್ ಆಗಿರಬಹುದು. ಅಲ್ಲದೆ, ಶಾಸನವನ್ನು ಶ್ರೀಕೊಯಿಲ್ (ಉಪಗುಡಿ) ಅಥವಾ ಗರ್ಭಗುಡಿಯ ತಳಪಾದಿಯ ಮೇಲೆ ಕೆತ್ತಿರುವುದರಿಂದ ದೇವಾಲಯದ ಆ ಕಟ್ಟಡ ಈ ಶಾಸನಕಾಲಕ್ಕಿಂತ ಮುಂಚೆಯೇ ನಿರ್ಮಾಣವಾಗಿತ್ತೆಂದು ಹೇಳಬಹುದು.

ತಡಿಮಾಲಿಂಗಿಯ ಜನಾರ್ದನ ದೇವಾಲಯದ ತಳಪಾದಿ ಕಲ್ಲುಗಳ ಮೇಲೆ ಕಂಡರಿಸಿರುವ ತಿನ ೨೩೦ ಈ ರಾಜನ ಮತ್ತೊಂದು ಶಾಸನ. ಕಾಲವನ್ನು ತಿಳಿಸುವ ಶಾಸನಭಾಗ ತ್ರುಟಿತವಾಗಿದೆ. ಉಳಿದಿರುವಷ್ಟರಲ್ಲಿ ರಾಜನ ಆಳಿಕೆಯ ವರ್ಷ ಇರು, ಎಂದರೆ ಇಪ್ಪತ್ತು, ಮಾತ್ರ ಉಳಿದಿದೆ. ಮುಂದಿನ ಏಕಗಳ ಅಂಕ ಇತ್ತೇ ಇಲ್ಲವೇ ತಿಳಿಯದು. ನರಸಿಂಹಾಚಾರ್ಯರು ಅದನ್ನು ೨೦ನೆಯ ವರ್ಷವೆಂದೇ ತೆಗೆದುಕೊಂಡು, ಕ್ರಿ. ಶ. ೧೦೦೪ ಎಂದು ಕಾಲವನ್ನು ನಿರ್ಧರಿಸಿದ್ದಾರೆ. ಕೆಲವು ಗಾವುಂಡರು ಮಾಯಿಲಂಗೆಯ ಭೂಮಿಯೊಂದನ್ನು ಅದರ ಅಂದಿನ ಬೆಲೆಯಾದ ೧೦೦ ಕಟಿಞ್ಜು ಹೊನ್ನಿಗೆ ಮಾರಿದುದನ್ನು ಶಾಸನ ತಿಳಿಸುತ್ತದೆ. ಇರವಿಕುಲಮಾಣಿಕ್ಕ (ರವಿಕುಲಮಾಣಿಕ್ಯ) ವಿಣ್ಣಗರಾಳ್ವಾರ್ ದೇವಾಲಯದ ಭಂಡಾರದಿಂದ ಈ ಹಣವನ್ನು ಪಡೆಯಲಾಯಿತು. ಈ ದೇವರ ಭಂಡಾರಕ್ಕೆ ಪೆರಿಯಕುನ್ದವೈ ಆಳ್ವಾರ್ ಭಂಡಾರದಿಂದ ಹಣವೊದಗಿಸಲಾಗಿತ್ತು. ರಾಜರಾಜನ ಅಕ್ಕ ಕುಂದವೈ. ಅದೇ ಹೆಸರಿನ ತನ್ನ ಮಗಳಿಗೂ ಈಕೆಗೂ ವ್ಯತ್ಯಾಸವನ್ನು ಸೂಚಿಸಲು ಈಕೆಯನ್ನು ಪೆರಿಯಕುಂದವೈ ಎಂದು ಕರೆಯಲಾಗುತ್ತಿತ್ತು. ಈ ಪೆರಿಯಕುಂದವೈಯ ಭಂಡಾರವನ್ನೇ ಶಾಸನವು ಸೂಚಿಸುವುದು. ಶಾಸನಪಾಠದ ಮೊದಲಲ್ಲಿ ಕೊಟ್ಟಿರುವ ಕಿರುಪರಿಚಯದಲ್ಲಿ (ಪು. ೭೧೩) ಪೆರಿಯಕುಂದವೈಆಳ್ವಾರ್ ಬಂಡಾರತ್ತಿಲ್ ಎಂಬುದನ್ನು ಪೆರಿಯಕುಂದವೈ ದೇವಾಲಯದ ಭಂಡಾರ ಎಂಬರ್ಥದಲ್ಲಿ ತೆಗೆದುಕೊಂಡಿದೆ. ಆದರೆ ರಾಜಕುಮಾರಿಯು ತನ್ನ ಭಂಡಾರದಿಂದಲೇ ದತ್ತಿಗಳನ್ನು ಕೊಟ್ಟಿರಬಹುದು; ಹಾಗಿದ್ದಲ್ಲಿ ಈ ದೇವಾಲಯಕ್ಕೆ ಆಕೆ ಹಣದ ರೂಪದಲ್ಲಿ ದತ್ತಿ ಬಿಟ್ಟಿರಬೇಕು. ರಾಜರಾಜನಿಗೆ ಇತರ ಬಿರುದಾವಳಿಗಳೊಂದಿಗೆ ರವಿಕುಲಮಾಣಿಕ್ಯ ಎಂಬ ಬಿರುದೂ ಇದ್ದುದನ್ನು ಗಮನಿಸಬೇಕು. ಆದ್ದರಿಂದ ದೇವಾಲಯವನ್ನು ಆತನ ಹೆಸರಿನಲ್ಲಿ, ಬಹುಶಃ ಆತನೇ, ನಿರ್ಮಿಸಿದ್ದಿರಬಹುದಾಗಿದೆ. ಸಹಜವಾಗಿಯೇ ರಾಜಕುಮಾರಿಯು ಸ್ವಂತ ಭಂಡಾರದಿಂದ ಅದಕ್ಕೆ ದತ್ತಿ ಬಿಟ್ಟಿದ್ದಾಳೆ. ಈ ಸ್ಥಳದ ತಮಿಳು ಶಾಸನಗಳಲ್ಲಿ ದೇವಸ್ಥಾನಕ್ಕೆ ಅದೇ ಹೆಸರೇ ಮುಂದುವರೆದಿದೆ. ಬಹುಶಃ ಮುಂದೆ ಹೊಯ್ಸಳರು ಈ ಪ್ರಾಂತವನ್ನಾಳಲಾರಂಭಿಸಿದ ಮೇಲೆ ಅದಕ್ಕೆ ಜನಾರ್ದನದೇವಾಲಯವೆಂಬ ಹೆಸರು ಬಂದಿರಬೇಕು. ತಮಿಳು ಶಾಸನಗಳಲ್ಲಿ ತಡಿಮಾಲಿಂಗಿಯನ್ನು ಜನನಾಥಪುರವಾದ ಮಾಯಿಲಂಗೈ ಎಂದು ಕರೆದಿದೆ.

ಭೂಮಿಯ ಕ್ರಯವಾದ ೧೦೦ ಕಟಿಂಜು ಹೊನ್ನನ್ನು ತುಲೈನಿಱೈಸೆಂಪೊನ್ ಎಂದು ವರ್ಣಿಸಿದೆ. ತುಲೈನಿಱೈಸೆಂಪೊನ್ ಎಂದರೆ ನಿಶ್ಚಿತಗೊಳಿಸಲ್ಪಟ್ಟ ತೂಕ ಹಾಗೂ ಮುದ್ರೆ (punch)ಗಳನ್ನೊಳಗೊಂಡ, ಶುದ್ಧೀಕರಣಗೊಳಿಸಲ್ಪಟ್ಟ ಚಿನ್ನ ಎಂದು ಅರ್ಥ. ಸೆಂಪೊನ್ ಎಂಬುದು ಚಿನ್ನದ ಪರಿಶುದ್ಧತೆಯನ್ನು ತಿಳಿಸಲುಪಯೋಗಿಸಲಾದ ಪದ. ತುಲೈ ಎಂದರೆ ಮುದ್ರೆಯನ್ನು ಹೊಂದಿದ, ನಿಱೈ ಎಂದರೆ ತೂಕಮಾಡಲ್ಪಟ್ಟ ಎಂದು ಅರ್ಥ. ದೇವಾಲಯಗಳಿಗೆ ದತ್ತಿ ನೀಡಲಾದ ಬಂಗಾರವನ್ನು ಚೋಳರ ಶಾಸನಗಳಲ್ಲಿ ಸಾಮಾನ್ಯವಾಗಿ ಹೀಗೆ ವರ್ಣಿಸಲಾಗಿದೆ.[1]

ತಿನ ೨೨೭ ಅದೇ ದೇವಾಲಯದ ದಕ್ಷಿಣ ತಳಪಾದಿ ಕಲ್ಲಿನ ಮೇಲೆ ಕಂಡರಿಸಲಾದ ಇದೇ ಒಂದನೆಯ ರಾಜರಾಜನ ಕಾಲದ್ದೆಂದು ಪರಿಗಣಿಸಬಹುದಾದ ಶಾಸನ. ಮೇಲಿನ ಶಾಸನದಂತೆ ಇದು ಸಹ ಮರುದೂರಿನ ಸಭೆಯವರು ಕಾಶುಗಳ ತೂಕದಿಂದ ತೂಗಿದ ೧೨೦ ಕಟಿಂಜು ಹೊನ್ನಿಗೆ (ತುಲೈನಿಱೈಸೆಂಪೊನ್) ಭೂಮಿ ಮಾರಿದುದನ್ನು ತಿಳಿಸುತ್ತದೆ. ಇದನ್ನು ತೆರಿಗೆ ರಹಿತವಾಗಿ ದೇವಾಲಯಕ್ಕೆ ಬಿಟ್ಟಿದ್ದಿರಬಹುದಾಗಿದ್ದು ಆ ದತ್ತಿಯನ್ನು

---

[1] ಇ ಐ., XXX, p. 109; ಹೆಚ್ಚಿನ ವಿವರಗಳಿಗೆ ನೋಡಿ: ಜೆ ಎನ್ ಎಸ್ ಐ., XX p. 9–14

ನಗರತ್ತಾರರು ನೋಡಿಕೊಳ್ಳಬೇಕಾಗಿತ್ತು. ಚೋಳರಾಜನು ಈ ದೇವಾಲಯವನ್ನು ಕಟ್ಟಿಸಿ ದೇವಾಲಯದ ಭಂಡಾರಕ್ಕೆ ಧಾರಾಳವಾಗಿ ಧನಸಹಾಯವನ್ನಿತ್ತುದೂ ಈ ಭಂಡಾರದಿಂದ ದೇವಾಲಯದಲ್ಲಿ ಪೂಜಾದಿಗಳನ್ನು ನಡೆಸಲು ಭೂಮಿಯನ್ನು ಕೊಂಡುದೂ ಇದರಿಂದ ಸ್ಪಷ್ಟಪಡುತ್ತದೆ. ರಾಜರಾಜನ ಸೋದರಿಯೂ ತನ್ನ ಭಂಡಾರದಿಂದ ಧನಸಹಾಯ ಮಾಡಿರುತ್ತಾಳೆ.

ಕಲಿಯೂರಿನಲ್ಲಿರುವುದು (ತಿನ ೨೨೦) ರಾಜರಾಜನ ಮೂರನೆಯ ಶಾಸನ. ಈ ಶಾಸನವನ್ನು ರೈಸ್ ಅವರೂ, ಅವರನ್ನನುಸರಿಸಿ ಪ್ರೊ. ಕೊಎಲ್ಹೊ. ಡಾ. ಡೆರೈಟ್ ಅವರೂ ಸರಿಯಾಗಿ ಅರ್ಥೈಸಿಲ್ಲ. ಈ ಶಾಸನದಲ್ಲಿ ಬರುವ ರಾಜರಾಜದೇವಪಾದಪಂಕಜಭ್ರಮರನಾದ ಅಪ್ರಮೇಯನು ತನ್ನ ಮೇಲೆ ಬಿದ್ದ ಸುತ್ತಮುತ್ತಲ ಸಾಮಂತರಾಜರ ಒಕ್ಕೂಟವನ್ನು ಎದುರಿಸಿ ಗೆದ್ದವನು. ಈ ಸಾಮಂತರಲ್ಲಿ ಹೊಯ್ಸಳ, ನೊಳಂಬ, ಶಬರ, ಶಾಂತರ, ಸೇನವಾರ ಮೊದಲಾದ ವಂಶಗಳಿಗೆ ಸೇರಿದವರಿದ್ದರು. ಇವರಲ್ಲಿ ಎಲ್ಲರನ್ನೂ ಗುರುತಿಸಲು ಸಾಧ್ಯವಿಲ್ಲ. ಗಂಗವಾಡಿಯನ್ನು ಆಕ್ರಮಿಸಿದ್ದ ಚೋಳರನ್ನು ಆಚೆಗೆ ಅಟ್ಟಲು ಇವರೆಲ್ಲ ಒಗ್ಗೂಡಿದ್ದರೆಂಬುದು ಸ್ಪಷ್ಟ. ಇದು ವಾಸ್ತವಿಕವಾಗಿ ಅದರಲ್ಲಿಯೇ ಹೇಳಿರುವಂತೆ ಅಪ್ರಮೇಯನು ನಿಲ್ಲಿಸಿದ ಜಯಸ್ತಂಭ. ಅಪ್ರಮೇಯನು ತೆಲ್ಲಕುಲಕ್ಕೆ ಸೇರಿದವನು; ಕೊತ್ತಮಂಡಲ (ಎಂದರೆ ಕೊತ್ತಮಂಗಲ) ನಾಥ. ಉಪಶಾಸನತಜ್ಞ ಎಂ. ಹನುಮಂತರಾಯರು ಇದನ್ನು ಬೇರೆಡೆ ವಿವರವಾಗಿ ಚರ್ಚಿಸಿದ್ದಾರೆ.[1]

ಒಂದು ಕುತೂಹಲಕಾರಿಯಾದ ಅಂಶವನ್ನು ಮಾತ್ರ ಇಲ್ಲಿ ಗಮನಿಸಬಹುದು. ಅಪ್ರಮೇಯನು ತೆಲ್ಲಕುಲಕ್ಕೆ ಸೇರಿದವನೆಂದು ಹೇಳಿದೆ. ತೆಲ್ಲಕುಲ ಎಂಬುದನ್ನು ತೇಯಕುಲವೆಂದು ತಪ್ಪಾಗಿ ಓದಿ, ಇದು ಕೊಡುಂಬಾಳೂರಿನ ಸಾಮಂತರು ಧರಿಸಿದ್ದ ಬಿರುದೆಂಬ ಕಾರಣದಿಂದ ಅಪ್ರಮೇಯನನ್ನು ಈ ಸಾಮಂತ ಮನೆತನಕ್ಕೆ ಸೇರಿದ ವಿಕ್ರಮಚೋಳನೆಂದು ಗುರುತಿಲಾಗಿದೆ. ತೇಜ ಎಂಬುದು ಉಚ್ಚಂಗಿಪಾಂಡ್ಯರು ಧರಿಸಿದ ಬಿರುದು. ಅವರಿಗೂ ಕೊಡುಂಬಾಳೂರಿನ ಸಾಮಂತರಿಗೂ ಒಂದು ತೆರನ ಸಂಬಂಧವಿದ್ದಿತು. ಆದ್ದರಿಂದ ತೇಯಕುಲ ಎಂಬುದು ಕೊಡುಂಬಾಳೂರಿನ ಸಾಮಂತರಿಗೆ ಅನ್ವಯಿಸಬಹುದಾದ ಬಿರುದು ಎಂಬ ವಾದವನ್ನು ಮುಂದಿಡಲಾಗಿದೆ. ಕೊತ್ತಮಂಡಲವು ಕೊಯಮತ್ತೂರು ಜಿಲ್ಲೆಯ ಕೊತ್ತನೂರು ಅಥವಾ ಕೋಟ್ಟನೂರಾಗಿರಬೇಕೆಂದೂ ಹೇಳಿದೆ. ಆದರೆ ಅಪ್ರಮೇಯನನ್ನು ಸ್ಪಷ್ಟವಾಗಿ ತೆಲ್ಲಕುಲತಿಲಕನೆಂದೇ ಶಾಸನದಲ್ಲಿ ಕರೆದಿದೆ. ಕೊತ್ತಮಂಡಲನಾಥ, ಕೊತ್ತಮಂಗೆಯಾಣ್ಮನೆಂದೂ ಹೇಳಿದೆ. ಕೊತ್ತಮಂಗೆ ಎಂಬುದು ಕೊತ್ತಮಂಗಲಂ ಎಂಬ ಹೆಸರಿನ ಗ್ರಾಮವಾಗಿರಬಹುದು. ತಮಿಳುನಾಡಿನ ತಿರುಚಿರಾಪಲ್ಲಿ ಜಿಲ್ಲೆಯ ಲಾಲ್ಗುಡಿ ಹಾಗೂ ತಂಜಾವೂರು ಜಿಲ್ಲೆಯ ಕುಂಭಕೋಣಂ ತಾಲ್ಲೂಕುಗಳಲ್ಲಿ ಈ ಹೆಸರಿನ ಒಂದೊಂದು ಗ್ರಾಮವಿದೆ. ಚೋಳರ ಸೇನಾನಿಯಾಗಿದ್ದ ಅಪ್ರಮೇಯನು ಚೋಳರ ರಾಜಧಾನಿಗೆ ಸಮೀಪದ ಪ್ರದೇಶದಲ್ಲಿ ಅಧಿಕಾರದಲ್ಲಿದ್ದು ಹೊಯ್ಸಳರ ದಾಳಿಯನ್ನೆದುರಿಸಲು ರಾಜರಾಜನಿಂದ ನಿಯೋಜಿಸಲ್ಪಟ್ಟಿರಬಹುದು. ಅಪ್ರಮೇಯನು ಹೊಸದಾಗಿ ಸೇರಿಸಿಕೊಳ್ಳಲಾದ ಈ ಪ್ರದೇಶದಲ್ಲಿ ಅಧಿಕಾರದಲ್ಲಿದ್ದನೆಂದು ಹೇಳಲಾಗದು.

ಮುಂದಿನ ಅರಸನಾದ ಒಂದನೆಯ ರಾಜೇಂದ್ರನ ಶಾಸನಗಳಲ್ಲಿ ಮೂರು ತಡಿಮಾಲಿಂಗಿಯಲ್ಲಿವೆ. ತಿನ ೨೩೩ ಜನಾರ್ದನ ದೇವಾಲಯದ ಉತ್ತರ ಮತ್ತು ಪೂರ್ವದಿಕ್ಕಿನ ತಳಪಾದಿಗಳ ಮೇಲಿರುವ ಒಂದು ಮುಖ್ಯವಾದ ಶಾಸನ. ಉಡೈಯಾರ್ ರಾಜೇಂದ್ರಚೋಳನ ಆಳಿಕೆಯ ೪ನೆಯ ವರ್ಷಕ್ಕೆ ಸೇರಿದ ಈ ಶಾಸನವು ಸಿಡಿವಿಳಕ್ಕು (ನಂದಾದೀಪ) ಉರಿಸಲು ಮತ್ತು ತಿರುವೋಲಕ್ಕು ಉತ್ಸವ ನಡೆಸಲು ೨ ಮಾಡೈಗಳನ್ನು ದಾನ ನೀಡಿದ ವಿಷಯವನ್ನು ತಿಳಿಸುತ್ತದೆ. ದತ್ತಿ ಬಿಟ್ಟುದು ಮುಡಿಗೊಂಡಶೋಳಮಂಡಲಕ್ಕೆ ಸೇರಿದ ಗಂಗೈಕೊಂಡಶೋಳವಳನಾಡೊಳಗಣ ಇಡ್ಡೈನಾಡಿನಲ್ಲಿರುವ ಜನನಾಥಪುರದ ರವಿಕುಲಮಾಣಿಕ್ಯವಿಣ್ಣಗರಾಳ್ವಾರ ದೇವಾಲಯಕ್ಕೆ. ಇದೇ ಊರಿನ ಮೇಲೆ ತಿಳಿಸಿರುವ ಒಂದನೆಯ ರಾಜರಾಜನ ಶಾಸನ (ತಿನ ೨೩೦)ದಿಂದ ಈ ಊರನ್ನು ಮಾಯಿಲಂಗೈ ಎಂದು ಕರೆಯಲಾಗಿದ್ದು ಅದು ಗಂಗಪಾಡಿಯ ದಕ್ಷಿಣಕ್ಕಿರುವ ಇಡ್ಡೈನಾಡಿನಲ್ಲಿರುವುದಾಗಿ ಹೇಳಿದೆ. ರಾಜರಾಜನ ಶಾಸನದ ಕಾಲದಿಂದೀಚೆಗೆ ಅದಕ್ಕೆ ಗಂಗೈಕೊಂಡಶೋಳವಳನಾಡು ಎಂಬ ಹೆಸರು ಬಂದಿರಬೇಕು. ಗಂಗೈಕೊಂಡಶೋಳ ಎಂಬುದು ಒಂದನೆಯ ರಾಜೇಂದ್ರನ ಬಿರುದು. ಆದ್ದರಿಂದ ರೈಸ್ ಅವರು ಉಡೈಯಾರ್ ಚೋಳಗಂಗನು ಒಂದನೆಯ ರಾಜೇಂದ್ರನೆಂದಿದ್ದಾರೆ. ಆದರೆ ಶಾಸನವು ರಾಜನ ನಾಲ್ಕನೆಯ ಆಳಿಕೆಯ ವರ್ಷಕ್ಕೆ ಸೇರಿದ್ದು ಗಂಗೆಯವರೆಗೆ ಅವನು ದಂಡೆತ್ತಿಹೋಗಿ ಬಂದಮೇಲೆ ಮಾತ್ರವೇ ಆತನು ಅಂತಹ ಬಿರುದನ್ನು ಹೊಂದಿರಬಹುದಾದ್ದರಿಂದ ರೈಸ್ ಅವರ ನಿರ್ಧಾರದ ಬಗೆಗೆ ಅನುಮಾನವೇಳುತ್ತದೆ. ರಾಜೇಂದ್ರನು ತನ್ನ ಆಳಿಕೆಯ

[1] K. V. Ramesh, B. R. Gopal and others (Ed): *Srīkaṇṭhikā*, pp. 79 ff

೧೦ನೆಯ ವರ್ಷದ ನಂತರವೇ (೧೦೨೧–೨೨) ಹೀಗೆ ದಂಡೆತ್ತಿಹೋದದ್ದರಿಂದ ಆ ಬಿರುದನ್ನು ಅದರ ನಂತರವೇ ಹೊಂದಿರಬೇಕು. ಇದು ಒಂದು ತೀವ್ರವಾದ ಆಕ್ಷೇಪಣೆಯೇ.

ಸುತ್ತೂರು ಶಾಸನ[1]ದಲ್ಲಿ ಉಕ್ತನಾದ ಒಡೈಯಾರ್ ಶ್ರೀ ಚೋಳಗಂಗದೇವನು ಒಂದನೆಯ ರಾಜೇಂದ್ರ ಚೋಳನೆಂದು ನಾನು ಗುರುತಿಸಿದ್ದೇನೆ. ಈ ವಿಷಯವಾಗಿ ನನ್ನ ಗಮನವನ್ನು ಸೆಳೆದು ಒಂದನೆಯ ರಾಜೇಂದ್ರ ಚೋಳನ ಆಳಿಕೆಯ ೪ನೆಯ ವರ್ಷದಲ್ಲಿಯೇ ಈ ನಾಡನ್ನು ಗಂಗೈಕೊಂಡಚೋಳವಳನಾಡೆಂಬ ಹೆಸರಿನಿಂದ ಕರೆಯಲು ಹೇಗೆ ಸಾಧ್ಯ ಎಂದು ಪ್ರಶ್ನಿಸಲಾಗಿದೆ. ಆದರೆ ಪ್ರಕೃತ ಶಾಸನದಲ್ಲಿನ ದಾನಿ ಪಂಚವನ್‌ಮನುಕುಲಕೇಸರಿಯಾದ ಪಂಚವನ್‌ಮಾರಾಯ. ಒಂದನೆಯ ರಾಜೇಂದ್ರನು ಯುವರಾಜನಾಗಿದ್ದಾಗ ಅವನಿಗೆ ಪಂಚವನ್‌ಮಾರಾಯ ಎಂಬ ಹೆಸರಿದ್ದುದು ಸ್ಪಷ್ಟವೇ ಇದೆ. ಆದ್ದರಿಂದ ಇಲ್ಲಿ ದಾನಿಯು ಆದೇ ರಾಜೇಂದ್ರಚೋಳನಾಗಿರಬೇಕು. ಶಾಸನದಲ್ಲಿ ಆತನನ್ನು ಪಂಚವನ್‌ಮನುಕುಲಕೇಸರಿ ಎಂದೂ ಕರೆದಿದೆ. ಬಲಮುರಿ ಶಾಸನ[2]ದಲ್ಲಿ ರಾಜರಾಜಚೋಳನ ಪಾದಪಂಕಜಭ್ರಮರನೆನಿಸಿದ ಪಞ್ಚವನ್‌ಮಹಾರಾಯನು ಗಂಗಮಂಡಲ ಮತ್ತು ಬೆಂಗಿಮಂಡಲಗಳ ಮಹಾದಂಡನಾಯಕನಾಗಿದ್ದನೆಂದು ಹೇಳಿದೆ. ಈ ಶಾಸನದ ಕಾಲ ಶಕ ೯೩೪ಕ್ಕೆ ಸರಿಹೊಂದುವ ಅರಸನ ಆಳಿಕೆಯ ೨೮ನೆಯ ವರ್ಷಕ್ಕೆ ಸಮನಾದ ಕ್ರಿ.ಶ. ೧೦೧೨. ಯುವರಾಜನಾಗಿದ್ದಾಗಲೇ ರಾಜೇಂದ್ರಚೋಳನಿಗೆ ಪಞ್ಚವನ್ ಮಾರಾಯನ್ ಎಂಬ ಬಿರುದಿದ್ದಿತೆಂಬ ಅಂಶ ಇದರಿಂದ ವ್ಯಕ್ತವಾಗುತ್ತದೆ. ಆದ್ದರಿಂದ ಪ್ರಸ್ತುತ ಶಾಸನದಲ್ಲಿ ಉಕ್ತನಾದ ದಾನಿ ಮೊದಲನೆಯ ರಾಜೇಂದ್ರನೇ.

ಮೊದಲು ಪಾಂಡ್ಯರಿಗೆ ಸೇರಿದ್ದು ತನ್ನ ತಂದೆಯಾದ ರಾಜರಾಜನಿಂದ ಹಾಗೂ ತನ್ನಿಂದ ಆಕ್ರಮಿಸಲ್ಪಟ್ಟ ಪ್ರದೇಶಕ್ಕೆ ತನ್ನ ಮನೆತನದ ರಾಜಪುತ್ರನೊಬ್ಬನನ್ನು ಆಳಿಕೆಯ ೧೦ನೆಯ ವರ್ಷದಲ್ಲಿ ರಾಜೇಂದ್ರಚೋಳನು ಪ್ರಾಂತಾಧಿಪತಿಯಾಗಿ ನೇಮಿಸಿದನೆಂಬುದು ತಿಳಿದ ವಿಷಯವೇ. ಹೀಗೆ ನೇಮಕಗೊಂಡ ರಾಜೇಂದ್ರಚೋಳನ ಮಗನಾದ ಜಟಾವರ್ಮ ಸುಂದರಚೋಳಪಾಂಡ್ಯನೂ ಈತನ ನಂತರ ಅದೇ ಅಧಿಕಾರದಲ್ಲಿ ಮುಂದುವರಿದ ಇತರರೂ ಚೋಳಪಾಂಡ್ಯರೆಂದು ಕರೆದುಕೊಂಡರು.[3] ಆದರೆ ಇದೇ ರೀತಿಯಲ್ಲಿ ರಾಜೇಂದ್ರಚೋಳನು ಆಕ್ರಮಿಸಿದ ಗಂಗರ ಪ್ರಾಂತಕ್ಕೆ ಇತರ ರಾಜಪುತ್ರರು ಯಾರಾದರೂ ನೇಮಕಗೊಂಡರೆನ್ನಲು ಆಧಾರಗಳಿಲ್ಲ. ರಾಜೇಂದ್ರನ ಆಳಿಕೆಯ ಏಳನೆಯ ವರ್ಷದಲ್ಲಿಯೇ ರಾಜಾಧಿರಾಜನು ಯುವರಾಜನಾಗಿ ಆಯ್ಕೆಯಾದನು. ಇಮ್ಮಡಿ ರಾಜೇಂದ್ರನ ಮನೆತನಕ್ಕೆ ಸೇರಿದ ಚೋಳ–ಪಾಂಡ್ಯ, ಚೋಳ–ಗಂಗ, ಚೋಳ–ಕೇರಳರು ಕ್ರಮವಾಗಿ ಪಾಂಡ್ಯ, ಗಂಗ ಹಾಗೂ ಕೇರಳದ ಪ್ರಾಂತಾಧಿಪತಿಗಳಾಗಿದ್ದರೆಂಬುದನ್ನು ಗಮನಿಸಲಾಗಿದೆ. ಅವರು ಆಳುತ್ತಿದ್ದ ಪ್ರಾಂತಗಳನ್ನನುಸರಿಸಿ ಅವರಿಗೆ ಆ ಬಿರುದುಗಳು ಕೊಡಲ್ಪಟ್ಟಿರಬಹುದು. ಆದರೆ ಮೊದಲನೆಯ ರಾಜೇಂದ್ರನ ಮಕ್ಕಳು ಯಾರೂ ಗಂಗಪ್ರಾಂತಕ್ಕೆ ಅಧಿಪತಿಗಳಾಗಿ ನಿಯಮಿಸಲ್ಪಡಲಿಲ್ಲ. ಹಾಗೆನ್ನಲು ಯಾವ ಆಧಾರಗಳೂ ಇಲ್ಲ. ರಾಜೇಂದ್ರನೇ ಆ ಅಧಿಕಾರದಲ್ಲಿದ್ದ ಕಾರಣ ಆತನನ್ನೇ ಶಾಸನಗಳಲ್ಲಿ ಚೋಳಗಂಗದೇವನೆಂದು ಕರೆದಿರಬಹುದು. ಮೇಲೆ ತಿಳಿಸಿರುವ ಸುತ್ತೂರು ಶಾಸನವು ಸು. ೧೧ನೆಯ ಶತಮಾನದ ಲಿಪಿಯಲ್ಲಿದೆ ಮತ್ತು ಅಲ್ಲಿ ಬರುವ ಚೋಳಗಂಗದೇವನನ್ನು ರಾಜೇಂದ್ರಚೋಳನೆಂದು ಗುರುತಿಸಲಾಗಿದೆ. ಆದ್ದರಿಂದ ಈ ಶಾಸನಗಳಲ್ಲಿ ಉಕ್ತನಾದ ಚೋಳಗಂಗನು ಒಂದನೆಯ ರಾಜೇಂದ್ರನೆಂದೇ ಈಗಲೂ ನಾನು ಪರಿಗಣಿಸುತ್ತೇನೆ. ತಡಿಮಾಲಿಂಗಿಯ ಶಾಸನ (ತಿನ ೨೩೩)ದಲ್ಲಿ ಉಕ್ತನಾದ ದಾನಿಯಂತೂ ರಾಜೇಂದ್ರಚೋಳನೇ. ಇದನ್ನು ದೃಷ್ಟಿಯಲ್ಲಿಟ್ಟುಕೊಂಡು ಈ ಮೊದಲು ಪ್ರಕಟವಾಗಿರುವ ಕೆಲಸೂರು ಶಾಸನ[4]ವನ್ನೂ ೧೧ನೆಯ ಶತಮಾನದ ಮಧ್ಯಭಾಗದವರೆಗೂ ಆಳುತ್ತಿದ್ದ ಒಂದನೆಯ ರಾಜೇಂದ್ರನ ಕಾಲಕ್ಕೆ ಸೇರಿಸಬಹುದು.

ಆದರೆ ಇಲ್ಲಿನ ಸಮಸ್ಯೆ ಎಂದರೆ ೪ನೆಯ ಆಳಿಕೆಯ ವರ್ಷಕ್ಕೆ ಸೇರಿದ ಸುತ್ತೂರು ಮತ್ತು ತಡಿಮಾಲಿಂಗಿ ಶಾಸನಗಳಲ್ಲಿ ಈ ಪ್ರಾಂತವನ್ನು ಗಂಗೈಕೊಂಡಚೋಳವಳನಾಡು ಎಂದು ಕರೆದಿರುವುದು. ಈ ಆಳಿಕೆಯ ವರ್ಷ ಕೆಲಸೂರು ಶಾಸನದಲ್ಲಿರುವಂತೆ ೧೪ (ಪದಿನಾಲಾವದು) ಆಗಿದ್ದು, ಇಲ್ಲಿ ತಪ್ಪಾಗಿ ೪ನೆಯದೆಂದು ಬರೆಯಲಾಗಿದೆ ಎಂದು ಸೂಚಿಸಬಯಸುತ್ತೇನೆ. ಇದನ್ನು ಒಪ್ಪಿಕೊಂಡರೆ ತಡಿಮಾಲಿಂಗಿಯ ಶಾಸನದ ಕಾಲ ೧೦೧೫–೧೬ ಆಗಿರದೆ ೧೦೨೫–೨೬ ಆಗುತ್ತದೆ.

---

[1] ಎ ಕ., III (1974), ನಂಗೂ ೨೧೩

[2] ಎ ಕ., III (ರೈಸ್‌ರವರ ಆವೃತ್ತಿ), ಶ್ರೀಪ ೧೪೦—ಈ ಶಾಸನದ ಪರಿಷ್ಕೃತ ಪಾಠವನ್ನು ಪ್ರಕಟವಾಗಲಿರುವ ಆರನೆಯ ಸಂಪುಟದಲ್ಲಿ (ಶ್ರೀಪ ೭೮) ಕೊಟ್ಟಿದೆ.

[3] ಎಸ್ ಐ ಐ., XIV, Introduction, p. iv

[4] ಎ ಕ., III (1974) ಗುಪೇ. 102.

ವೈ ೨೨೧ ಚೋಳಗಂಗದೇವನ ೧೩ನೆಯ ವರ್ಷದ ಕನ್ನಡ ಶಾಸನ. ಚೋಳಗಂಗನನ್ನು ಒಂದನೆಯ ರಾಜೇಂದ್ರನೆಂದು ಗುರುತಿಸಿರುವುದರಿಂದ ಈ ಶಾಸನವೂ ಆತನ ಕಾಲದ್ದೆಂದೇ ಇಟ್ಟುಕೊಂಡಲ್ಲಿ ೧೩ನೆಯ ಆಳಿಕೆಯ ವರ್ಷವು ಕ್ರಿ.ಶ. ೧೦೨೪–೨೫ ಆಗುತ್ತದೆ.

ಕ್ರಿ.ಶ. ೧೦೨೧–೨೨ರ ಒಂದನೆಯ ರಾಜೇಂದ್ರನ ತಿನ ೨೭೯ನೆಯ ಶಾಸನವು ಕುರವನ್ ಉಲಗಳಂದಾನ್ ಎಂದು ಕರೆಯಲಾದ ರಾಜೇಂದ್ರಶೋಳ ಜಯಮೂರ್‌ನಾಡಾಳ್ವಾನ್ ಎಂಬ ಸೇನಾಪತಿಯು ಮಾಡಿದ ಸುವರ್ಣದಾನವನ್ನು ತಿಳಿಸುತ್ತದೆ. ಈತನು ಒಂದನೆಯ ರಾಜರಾಜನ ಅಧೀನದಲ್ಲಿ ರಾಜರಾಜಮಹಾರಾಜನ್ ಎಂದು ಕರೆಸಿಕೊಂಡಿರುವ ಇದೇ ಹೆಸರಿನ ಅಧಿಕಾರಿಯಾಗಿರಬೇಕು. ರಾಜರಾಜನ ಆಳಿಕೆಯ ೧೬ನೆಯ ವರ್ಷದಲ್ಲಿ (ಕ್ರಿ.ಶ. ೧೦೦೧) ಆರಂಭವಾದ ಮೋಜಣಿಕಾರ್ಯವನ್ನು ಈತನು ಯಶಸ್ವಿಯಾಗಿ ಪೂರೈಸಿದುದರಿಂದ ಈತನನ್ನು ಉಲಗಳಂದಾನ್ (ಭೂಮಿಯನ್ನಳೆದವನು) ಎಂದು ಕರೆಯಲಾಗಿದೆ. ಒಂದನೆಯ ರಾಜೇಂದ್ರನ ಕಾಲದಲ್ಲಿಯೂ ಇವನ ಅಧಿಕಾರ ಮುಂದುವರೆದಿರುವುದು ಸ್ಪಷ್ಟ. ಈ ಶಾಸನದಲ್ಲಿ ಈತನನ್ನು ರಾಜೇಂದ್ರಶೋಳ ಜಯಮೂರ್‌ನಾಡಾಳ್ವಾನ್ ಎಂದು ಕರೆದಿರಲು ಕಾರಣ ಇದೇ ಆಗಿರಬಹುದು. ದೇವಾಲಯವನ್ನು ರಾಜರಾಜನು ಕಟ್ಟಿಸಿದುದರಿಂದ ಅವನಲ್ಲಿ ಅಧಿಕಾರಿಯಾಗಿದ್ದು ಮುಂದೆ ಅವನ ಮಗನ ಆಳಿಕೆಯಲ್ಲಿಯೂ ಅಧಿಕಾರದಲ್ಲಿ ಮುಂದುವರೆದುದರಿಂದ ಈ ದೇವಾಲಯಕ್ಕೆ ದತ್ತಿಕೊಡುವುದು ಸೂಕ್ತವೆಂದು ಭಾವಿಸಿದನು. ಈ ಸಂದರ್ಭದಲ್ಲಿ ಇಮ್ಮಡಿ ರಾಜೇಂದ್ರನ ಕೈಕೆಳಗೂ ಅರೈಯನ್‌ರಾಜರಾಜನೆನಿಸಿದ ವೀರರಾಜೇಂದ್ರ ಜಯಮೂರಿನಾಡಾಳ್ವನೆಂದು ಗುರುತಿಸಲಾದ ಸೇನಾಪತಿ ಜಯಮೂರಿನಾಡಾಳ್ವಾನ್ ಎಂಬ ಒಬ್ಬ ಅಧಿಕಾರಿ ಇದ್ದುದನ್ನು ಗಮನಿಸಬೇಕು. ಆದರೆ ಆತನು ಪ್ರಕೃತ ಶಾಸನದ ಕುರವನ್ ಉಲಗಳಂದಾನ್‌ಗಿಂತ ಬೇರೆಯವನೆನ್ನುವುದು ಸ್ಪಷ್ಟ. ಇದು ಇದುವರೆಗೂ ಗಮನಕ್ಕೆ ಬಾರದಿದ್ದ ವಿಷಯ.

ಒಂದನೆಯ ರಾಜೇಂದ್ರನ ತಡಿಮಾಲಿಂಗಿ ಶಾಸನದಲ್ಲಿ ಕಂಡುಬರುವ ಇನ್ನೊಬ್ಬ ದಾನಿ ಉತ್ತಮಶೋಳವಿಚ್ಚಾದಿ ಅರೈಯನ್ (ತಿನ ೨೩೨). ಉತ್ತಮಶೋಳ ಎಂಬುದು ಒಂದನೆಯ ರಾಜೇಂದ್ರನ ಬಿರುದುಗಳಲ್ಲೊಂದು. ಆದ್ದರಿಂದ ದಾನಿಯು ರಾಜೇಂದ್ರನ ಅಧಿಕಾರಿಯಾಗಿದ್ದ ವಿಚ್ಚಾದಿಅರೈಯನ್ ಆಗಿರಬೇಕು. ಮಾಡೈಗೆ ಒಂದು ತಿಂಗಳಿಗೆ ಒಂದು ಕುನ್ನಿಯಂತೆ ೩ ಹೊನ್ನು ೩ ಮಂಜಾಡಿ ಬಡ್ಡಿಬರುವ ೩ ಮುಡಿಗೊಂಡಶೋಳನ್‌ಮಾಡೈಗಳನ್ನು ದತ್ತಿ ಬಿಟ್ಟುದನ್ನು ಶಾಸನ ತಿಳಿಸುತ್ತದೆ. ಇದರಿಂದ ೧ ಹೊನ್ನಿಗೆ ೨೦ ಮಂಜಾಡಿಗಳೂ, ಒಂದು ಮಂಜಾಡಿಗೆ ೨ ಕುನ್ನಿಗಳೂ ಸಮವೆಂಬುದು ಸ್ಪಷ್ಟಪಡುತ್ತದೆ.

ಕೃನ ೧೧೩ ಹಂಪಾಪುರದಲ್ಲಿರುವ ಇದೇ ಅರಸನ ಕ್ರಿ.ಶ. ೧೦೩೩ರ ಕನ್ನಡ ಶಾಸನ. ಚಂಗಾಳ್ವರೊಡನೆ ಹೊಡೆದಾಡಿ ಸತ್ತ ವೀರನೊಬ್ಬನ ಸ್ಮಾರಕವಾಗಿ ನಿಲ್ಲಿಸಿರುವ ವೀರಗಲ್ಲು. ಚೋಳರು ಚಂಗಾಳ್ವರನ್ನು ಈ ಕಾಲಕ್ಕೆ ಇನ್ನೂ ಅಧೀನಪಡಿಸಿಕೊಂಡಿರಲಿಲ್ಲವೆಂಬುದನ್ನು ಇದು ಸೂಚಿಸುತ್ತದೆ.

ಮಲ್ಲೇಗೌಡನಕೊಪ್ಪಲಿನ ಎರಡು ಶಾಸನಗಳು (ವೈ ೧೧೩, ೧೧೪) ತಿಲುಗರಮಾರಿ ಎಂಬ ಬಿರುದಿದ್ದ ಚಂಗಾಳ್ವನು ತನ್ನ ಕಿರಿಸೋದರನೊಡಗೂಡಿ ಊರಿನ ತುರುವನ್ನು ಕೊಂಡುಹೋಗುತ್ತಿದ್ದಾಗ ಬಾಗ್ನುಳಿ ಸಿರಿಯಣ್ಣ ಮತ್ತು ಪಂಚಿಯ ಮದ್ದಯ್ಯ ಎಂಬ ವೀರರು ಕಾದಿ ಸತ್ತುದನ್ನು ತಿಳಿಸುವ ವೀರಗಲ್ಲುಗಳು. ಇವುಗಳ ಕಾಲ ಕ್ರಿ.ಶ. ೧೦೩೬. ಕಾಲದ ವಿವರಗಳಲ್ಲಿ ಸ್ವಲ್ಪ ತಪ್ಪಿರುವಂತೆ ತೋರುತ್ತದೆ. ರಾಜೇಂದ್ರಚೋಳನ ೨೩ನೆಯ ಆಳಿಕೆಯ ವರ್ಷ ಧಾತುಸಂವತ್ಸರವಲ್ಲ. ಧಾತು ಅವನ ೨೫ನೆಯ ವರ್ಷವಾಗುತ್ತದೆ. ಇದರಲ್ಲಿ ಉಕ್ತನಾದ ಚಂಗಾಳ್ವನು ನನ್ನಿಚಂಗಾಳ್ವನಿರಬೇಕೆಂದು ಕೃಷ್ಣ ಅವರು ಸೂಚಿಸಿದ್ದಾರೆ. ಕ್ರಿ.ಶ. ೧೦೩೭ರಲ್ಲಿಯೂ ಚಂಗಾಳ್ವರನ್ನು ಚೋಳರು ಸ್ವಾಧೀನಪಡಿಸಿಕೊಂಡಿರಲಿಲ್ಲವೆಂದು ನಾನು ಮೊದಲೇ ಸೂಚಿಸಿದ್ದೇನೆ.[1] ಪ್ರಕೃತ ಶಾಸನಗಳು ಅದಕ್ಕಿಂತ ಒಂದು ವರ್ಷ ಮುಂಚಿನವಾಗಿದ್ದು ಚಂಗಾಳ್ವನು ಮೇಲೆ ಬಿದ್ದುದನ್ನು ಸ್ಪಷ್ಟವಾಗಿ ಸೂಚಿಸುತ್ತವೆ. ಹಂಪಾಪುರದ ಶಾಸನವು ೩ ವರ್ಷಗಳ ಹಿಂದಿನದು. ಇವೆಲ್ಲವೂ ತುರುಗಾಳಗಗಳನ್ನು ಸೂಚಿಸಿದರೂ, ಚೋಳರೂ ಚಂಗಾಳ್ವರೂ ವಿರೋಧ ಬಣಗಳಲ್ಲಿದ್ದರೆಂಬುದು ಮಾತ್ರ ನಿಜ. ಮಲ್ಲೇಗೌಡನಕೊಪ್ಪಲಿನ ಶಾಸನಗಳಲ್ಲಿ ಚಂಗಾಳ್ವನಿಗೆ ತಿಲುಗರಮಾರಿ ಎಂಬ ಬಿರುದಿದೆ. ಅಂಕನಾಥಪುರದ ಶಾಸನದಲ್ಲಿ[2] ರಾಜೇಂದ್ರನಿಗೆ ತೆಲ್ಗರಮಾರಿ ಎಂಬ ಬಿರುದಿದೆ. ತಿಗುಳರಮಾರಿ ಎಂಬುದು ಬಹುಶಃ ತಪ್ಪಾಗಿ ತಿಲುಗರಮಾರಿ ಆಗಿರಬಹುದು.

---

[1] ಎ ಕ., III (1·74), ಪೀಠಿಕೆ, ಪು. 74.

[2] ಅದೇ, ಹೆಕೋ ೭

ಚಿಕ್ಕಹನಸೋಗೆಯ ಎರಡು ಶಾಸನಗಳಿಂದ ವೀರರಾಜೇಂದ್ರ ನನ್ನಿಚಂಗಾಳ್ವದೇವನು (ಕೃನ ೨೧) ದೇಸಿಯಗಣ ಪುಸ್ತಕಗಚ್ಛಕ್ಕೆ ಸೇರಿದ ಅಬ್ಬಯಜಿನಾಲಯ (ಕೃನ ೨೦)ವೆಂಬ ಬಸದಿಯನ್ನು ಕಟ್ಟಿಸಿದುದಾಗಿ ತಿಳಿದುಬರುತ್ತದೆ. ವೀರರಾಜೇಂದ್ರ ಎಂಬುದು ಈ ನನ್ನಿಚಂಗಾಳ್ವನ ಬಿರುದು ಎಂಬುದು ಸ್ಪಷ್ಟ. ತಮಿಳುಭಾಷೆಯ ತಮಿಳು ಮತ್ತು ಗ್ರಂಥ ಲಿಪಿಗಳಲ್ಲಿರುವ ಕೃನ ೨೧ನೆಯ ಶಾಸನದಲ್ಲಿ ರಾಜೇಂದ್ರಚೋಳ ಎಂಬ ಹೆಸರು ಮಾತ್ರ ಇದೆ. ಮುಂದಿನ ಶಾಸನದಲ್ಲಿ ಬಸದಿಯನ್ನು ನನ್ನಿಚಂಗಾಳ್ವನು ಕಟ್ಟಿಸಿದನೆಂದು ಸ್ಪಷ್ಟವಾಗಿ ಹೇಳಿರುವುದರಿಂದ ಈ ಶಾಸನದಲ್ಲಿ ಸೂಚಿತವಾಗಿರುವ ರಾಜೇಂದ್ರ ಚೋಳ ಎಂಬುದು ಚಂಗಾಳ್ವನ ಬಿರುದಾಗಿರಬಹುದು. ಈ ಎರಡು ಶಾಸನಗಳಲ್ಲಿಯೂ ಕಾಲವನ್ನು ಸೂಚಿಸಿಲ್ಲ. ಕೃನ ೨೧ ರಲ್ಲಿ ಈತನನ್ನು ವೀರರಾಜೇಂದ್ರನೆಂದು ಕರೆದಿದೆ. ಇದು ಚೋಳರ ಮೊದಲನೆಯ ರಾಜೇಂದ್ರನ ಬಿರುದು. ಆದ್ದರಿಂದ ಚೋಳರಿಂದ ಸೋಲಿಸಲ್ಪಟ್ಟನಂತರ ನನ್ನಿಚಂಗಾಳ್ವನು ಈ ಬಿರುದುಗಳನ್ನು ಧರಿಸಿರಬಹುದು. ಕ್ರಿ.ಶ. ೧೦೩೭ರವರೆಗೂ ಚಂಗಾಳ್ವರು ಸ್ವತಂತ್ರರಾಗಿದ್ದರೆಂದು ಹೇಳಿದೆ. ಆದ್ದರಿಂದ ಈ ಶಾಸನಗಳು ಅನಂತರದ ವರ್ಷಗಳಲ್ಲಿ ಕಂಡರಿಸಿದ್ದಾಗಿರಬೇಕು ಎಂಬುದು ಸ್ಪಷ್ಟವಾಗುತ್ತದೆ.

ತಮಿಳು ಗ್ರಂಥಲಿಪಿಯಲ್ಲಿರುವ ತಿಪ್ಪೂರಿನ ತಮಿಳು ಶಾಸನವು (ಕೃನ ೧೧೦) ಕುಲೋತ್ತುಂಗನ ೩೩ನೆಯ ವರ್ಷದಲ್ಲಿ ಒಬ್ಬ ಹೊಯ್ಸಳನು ದಾಳಿಮಾಡಿದಾಗ ರಾಜೇಂದ್ರಶೋಳತ್ತೆರಿಂದ್ದವಲಂಗೈಪ್ಪೆಡೈಕಾರರೆಂಬ ಸೈನ್ಯದ ತುಕಡಿಗೆ ಸೇರಿದ ರಾಜೇಂದ್ರಶೋಳಮೂರಾಯನ ಮಗ ಚೋಳಗಂಗಣನೆಂಬುವನು ಪ್ರಮುಖಪಾತ್ರವಹಿಸಿದ್ದನೆನ್ನುತ್ತದೆ. ಶಾಸನ ತ್ರುಟಿತವಾಗಿರುವುದರಿಂದ ಅದನ್ನು ಪೂರ್ತಿಯಾಗಿ ಅರ್ಥೈಸಲು ಸಾಧ್ಯವಾಗಿಲ್ಲ. ಇದು ೧೧ನೆಯ ಶತಮಾನದ ಲಿಪಿಯಲ್ಲಿದೆ. ಒಂದನೆಯ ಮತ್ತು ಮೂರನೆಯ ಕುಲೋತ್ತುಂಗರು ಮಾತ್ರ ಈ ಶಾಸನದಲ್ಲಿ ಸೂಚಿಸಿರುವ ಆಳಿಕೆಯ ವರ್ಷವಾದ ೩೩ ವರ್ಷಗಳಿಗಿಂತ ಹೆಚ್ಚುಕಾಲ ಆಳಿದರು. ಹೊಯ್ಸಳರು ಆಕ್ರಮಣ ನಡೆಸಿದುದು ಉತ್ತರ್ಗಙ್ಗೈನಾಡಿನ ತುಙ್ಗೈತಿಪ್ಪೂರಿನ ಮೇಲೆ. ಮುಮ್ಮಡಿ ಕುಲೋತ್ತುಂಗನು ಪಟ್ಟಕ್ಕೆ ಬರುವವೇಳೆಗೆ ಇಡೀ ಗಂಗವಾಡಿ ಮತ್ತು ಉತ್ತರ್ಗಙ್ಗೈನಾಡಿನ ಸುತ್ತಮುತ್ತಲ ಪ್ರದೇಶಗಳು ಹೊಯ್ಸಳರ ವಶವಾಗಿದ್ದುವು. ಆದ್ದರಿಂದ ಈ ಶಾಸನದ ಕುಲೋತ್ತುಂಗನನ್ನು ಒಂದನೆಯ ಕುಲೋತ್ತುಂಗನೆಂದು ಪರಿಗಣಿಸಬೇಕು. ಆಗ ಶಾಸನದ ಕಾಲ ಕ್ರಿ.ಶ. ೧೧೦೨-೦೩ ಎಂದಾಗುತ್ತದೆ. ಇದಾದ ಸುಮಾರು ೧೫ ವರ್ಷಗಳನಂತರ ವಿಷ್ಣುವರ್ಧನನು ಅಡಿಗೈಮಾನನನ್ನು ಸೋಲಿಸಿದನು. ಬಹುಶಃ ಹೊಯ್ಸಳನು ತನ್ನ ಬಲವನ್ನು ಇಲ್ಲಿ ಪರೀಕ್ಷೆಗೊಡ್ಡಿದ್ದಿರಬಹುದು. ಆದರೆ ಹೆಚ್ಚೇನನ್ನೂ ಸಾಧಿಸಲಿಲ್ಲ.

ತಿನ ೧೦೪ ಐದು ತಾಮ್ರದ ಹಲಗೆಗಳ ಎರಡು ಮುಖಗಳಲ್ಲಿಯೂ ತಮಿಳು ಗ್ರಂಥ ಲಿಪಿಗಳಲ್ಲಿ ಕಂಡರಿಸಿರುವ ತಮಿಳು ಶಾಸನ. ರಾಜೇಂದ್ರಚೋಳ ಕರಿಕಾಲಚೋಳನು ತನ್ನ ಆಳಿಕೆಯ ೧೫ನೆಯ ವರ್ಷದಲ್ಲಿ ಕೆರೆ ಮತ್ತು ದೇವಾಲಯವನ್ನು ಕಟ್ಟಿಸಿದ ಶೋೞಾಂಡಾನ್ ಎಂಬುವನಿಗೆ ಭೂಮಿಯನ್ನು ದತ್ತಿಬಿಟ್ಟುದನ್ನು ಇದು ತಿಳಿಸುತ್ತದೆ. ಈ ರಾಜ ಯಾರು ಎಂದು ತಿಳಿಯುವುದು ಕಷ್ಟ. ಈಗ ತಿಳಿದುಬಂದಿರುವ ಮಟ್ಟಿಗೆ ಕರಿಕಾಲಚೋಳ ಎಂಬ ಬಿರುದು ಹೊಂದಿದ್ದವರು ಇಮ್ಮಡಿ ರಾಜೇಂದ್ರನ ನಂತರ ಪಟ್ಟಕ್ಕೆ ಬಂದ ಅವನ ತಮ್ಮ ವೀರರಾಜೇಂದ್ರ ಮತ್ತು ಮುಮ್ಮಡಿ ಕುಲೋತ್ತುಂಗ. ವೀರರಾಜೇಂದ್ರ ಅಷ್ಟು ದೀರ್ಘಕಾಲ ಆಳಲಿಲ್ಲವಾದ್ದರಿಂದ ಅವನನ್ನು ಗಣನೆಗೆ ತೆಗೆದುಕೊಳ್ಳಬೇಕಾಗಿಲ್ಲ. ಉಳಿದವನು ಸು.ಕ್ರಿ.ಶ. ೧೧೭೮ ರಿಂದ ಆಳಲಾರಂಭಿಸಿದ ಮುಮ್ಮಡಿ ಕುಲೋತ್ತುಂಗ. ಅವನ ೧೫ನೆಯ ಆಳಿಕೆಯ ವರ್ಷವೆಂದರೆ ಕ್ರಿ.ಶ. ೧೧೯೩-೯೪. ಆದರೆ ಪ್ರಕೃತ ಶಾಸನದಲ್ಲಿರುವ ರಾಜನ ಹೆಸರು ರಾಜೇಂದ್ರಚೋಳ. ಲಿಪಿಯ ಆಧಾರದ ಮೇಲೆ ಶಾಸನವನ್ನು ಸು. ೧೩ನೆಯ ಶತಮಾನಕ್ಕೆ ಸೇರಿಸಬಹುದಾಗಿದ್ದು ಆಗ ಮುಮ್ಮಡಿ ರಾಜೇಂದ್ರನು ಆಳುತ್ತಿದ್ದನು. ಅವನಿಗೂ ಕರಿಕಾಲಚೋಳ ಎಂಬ ಬಿರುದಿತ್ತೇ ಎಂಬುದು ತಿಳಿಯದು.

## ಹೊಯ್ಸಳರು

ಈ ಸಂಪುಟದ ಸುಮಾರು ೧೧ ಶಾಸನಗಳನ್ನು ವಿಷ್ಣುವರ್ಧನನ ಕಾಲದವೆನ್ನಬಹುದು. ಮೈ ೧೩೦ ಮೈಸೂರು ಜಿಲ್ಲೆಯ ಶಾಸನಗಳಲ್ಲಿಯೇ ಅವನ ಅತ್ಯಂತ ಪ್ರಾಚೀನ ಶಾಸನ. ಕ್ರಿ.ಶ. ೧೧೦೯-೧೦ರ ಕಾಲದ್ದಾದ ಇದು ತುಂಡು ಶಾಸನವಾಗಿದ್ದು ಅನೇಕ ವಿವರಗಳು ನಷ್ಟವಾಗಿವೆ. ಬಿಟ್ಟಿಗಕ್ಷಿತಿ[ಪ] ಮತ್ತು ಸಂಧಿವಿಗ್ರಹಿ ಪುಣಿಸಮಯ್ಯರ ಹೆಸರು ಇವರಲ್ಲಿವೆ. ಪುಣಿಸಮಯ್ಯನು ವಿಷ್ಣುವರ್ಧನನ ಪ್ರಸಿದ್ಧರಾದ ದಂಡನಾಯಕರಲ್ಲಿ ಒಬ್ಬ. ಚಾಮರಾಜನಗರದ ಶಾಸನದಲ್ಲಿ[1] ಇವನ ವಂಶದ ವಿವರವಿದೆ. ಈ ಶಾಸನದಲ್ಲಿರುವ ಸಂಧಿವಿಗ್ರಹಿ ಪುಣಿಸಮಯ್ಯನು ಅವನೇ ಮತ್ತು ಇಲ್ಲಿರುವ ಬಿಟ್ಟಿಗನೂ

[1] ಎ ಕ., IV (1975), ಚಾನ ೨

ನಿರ್ವಿವಾದವಾಗಿ ವಿಷ್ಣುವರ್ಧನನೇ. ಬಸದಿಯೊಂದಕ್ಕೆ ದತ್ತಿ ಬಿಟ್ಟುದನ್ನು ಈ ಶಾಸನ ತಿಳಿಸುವಂತೆ ತೋರುತ್ತದೆ. ಶಾಸನ ದೊರೆತ ವರಕೋಡುಗ್ರಾಮದಲ್ಲಿ ಈಗ ಯಾವ ಬಸದಿಯೂ ಇಲ್ಲ. ಆದರೆ ಈ ಶಾಸನದಿಂದ ಆಗ ಅಲ್ಲಿ ಬಸದಿಯೊಂದಿತ್ತೆಂದು ಹೇಳಬಹುದು.

ಶಕ ೧೦೩೮ನೆಯ ದುರ್ಮುಖಿಸಂವತ್ಸರಕ್ಕೆ ಸಮನಾದ ಕ್ರಿ.ಶ. ೧೧೧೬–೧೭ನೆಯ ವರ್ಷದ ಕೃನ ೧೧೮ನೆಯ ಶಾಸನ ತಲಕಾಡುಗೊಂಡ ಎಂಬ ಬಿರುದನ್ನು ಹೊಂದಿದ್ದ ವೀರಗಂಗ ವಿಷ್ಣುವರ್ಧನ ಬಿಟ್ಟಿಗ ಹೊಯ್ಸಳದೇವನ ಆಳಿಕೆಗೆ ಸೇರಿದುದು. ಇದರಿಂದ ವಿಷ್ಣುವರ್ಧನನು ಆ ಹೊತ್ತಿಗೆ ತಲಕಾಡು ಪ್ರಾಂತವನ್ನು ಸ್ವಾಧೀನಪಡಿಸಿಕೊಂಡಿದ್ದನೆಂದು ಹೇಳಬಹುದು. ಈ ಶಾಸನದಲ್ಲಿಯೂ ದಂಡನಾಯಕ ಪುಣಿಸಮಯ್ಯನು ಕರಿಕಂಠಜೀಯನಿಗೆ ದೇವದಾನವಾಗಿ ಭೂಮಿ ದಾನಮಾಡಿದ ದಾನಿಗಳಲ್ಲೊಬ್ಬನಾಗಿ ಕಾಣಿಸಿಕೊಳ್ಳುತ್ತಾನೆ. ಇದು ಶೈವ ದೇವಾಲಯಕ್ಕೆ ಬಿಟ್ಟ ದತ್ತಿಯೆಂಬುದು ಸ್ಪಷ್ಟ. ಹೊಯ್ಸಳ ರಾಜನ ದಂಡನಾಯಕರು ಸಹ ಪರಮತಸಹಿಷ್ಣುಗಳಾಗಿದ್ದರೆಂಬುದನ್ನು ಇದು ತೋರಿಸುತ್ತದೆ.

ತಿನ ೧೫೧ ತಮಿಳು ಮತ್ತು ಗ್ರಂಥಾಕ್ಷರಗಳಲ್ಲಿರುವ ಸಂಸ್ಕೃತ ಮತ್ತು ತಮಿಳು ಭಾಷೆಗಳ ಈ ರಾಜನ ಬಹು ಮುಖ್ಯವಾದೊಂದು ಶಾಸನ. ತಲಕಾಡಿನ ಕೀರ್ತಿನಾರಾಯಣದೇವಾಲಯದ ತಳಪಾದಿಯ ಮೇಲಿರುವ ಈ ಶಾಸನದಲ್ಲಿ ಸಂಸ್ಕೃತದ ಹತ್ತು ಪದ್ಯಗಳಿವೆ. ವಿನಯಾದಿತ್ಯನಿಂದಾರಂಭಿಸಿ ಅವನ ಮತ್ತು ಕೆಳೆಯಬ್ಬರಸಿಯರ ಮಗ ಎಱೆಯಂಗ, ಅವನ ಮಗ ವಿಷ್ಣುವರ್ಧನ, ವಿಷ್ಣುವರ್ಧನನ ಹಿರಿಯಮಗ ನರಸಿಂಹ ಮತ್ತು ಆತನಿಗೆ ಏಚಲದೇವಿಯಲ್ಲಿ ಜನಿಸಿದ ಮಗ ಇಮ್ಮಡಿ ಬಲ್ಲಾಳರನ್ನೊಳಗೊಂಡಂತೆ ಹೊಯ್ಸಳರ ವಂಶಾವಳಿ ಇದರಲ್ಲಿದೆ. ಅನಂತರ ವಿಷ್ಣುವರ್ಧನನನ್ನು ಮಂಡಲಿಕ ನಾರಾಯಣ ಮಂಡಲಿಕ ವೇಟ್ಟೈಕಾರ, ಮಂಡಲಿಕ ಚೂಡಾಮಣಿ ಎಂದು ಮುಂತಾಗಿ ಹೊಗಳಿ ಈ ರಾಜನು ಶಾಸನೋಕ್ತ ದಿನದಂದು ತಲಕಾಡನ್ನು ಗೆದ್ದು ಆದಿಯಮನನ್ನು ನಾಶಪಡಿಸಿದ ಮೇಲೆ ಕೀರ್ತಿನಾರಾಯಣನ ಪ್ರತಿಷ್ಠೆಮಾಡಿ ದೇವಾಲಯ ದಲ್ಲಿ ಪೂಜೆಪುರಸ್ಕಾರಗಳಿಗಾಗಿ ಹಲವು ಗ್ರಾಮಗಳನ್ನು ದತ್ತಿಬಿಟ್ಟನೆಂದು ತಿಳಿಸುತ್ತದೆ. ಈ ರಾಜನು ಪಂಚನಾರಾಯಣ ವಿಗ್ರಹಗಳನ್ನು ಪ್ರತಿಷ್ಠಾಪಿಸಿದನೆಂಬ ಪ್ರತೀತಿಯನ್ನು ಈ ಶಾಸನ ದೃಢಪಡಿಸುತ್ತದೆಂದು ರಾ. ನರಸಿಂಹಾಚಾರ್ಯರು ಸ್ಪಷ್ಟಪಡಿಸಿದ್ದಾರೆ. ಅವುಗಳಲ್ಲಿ ಬೇಲೂರು ಮತ್ತು ತಲಕಾಡುಗಳಲ್ಲಿರುವ ಎರಡಾದರೂ ಬೆಳಕಿಗೆ ಬಂದಿವೆ.

ಈ ಶಾಸನದಲ್ಲಿ ಕೊಟ್ಟಿರುವ ಕಾಲ ಕುತೂಹಲಕ್ಕೆಡೆಮಾಡಿದೆ. ಹೇವಿಳಂಬಿಸಂವತ್ಸರದ ಮಾರ್ಗಶಿರ ಮಾಸದ ಶುಕ್ಲಪಕ್ಷದ ತ್ರಯೋದಶಿ ಶುಕ್ರವಾರ ವಿಶಾಖನಕ್ಷತ್ರ—ಎಂಬೀ ಶಾಸನೋಕ್ತ ವಿವರಗಳು ವಿಷ್ಣುವರ್ಧನನ ಆಳಿಕೆಯ ಕಾಲದ ೭ ನೆಯ ಡಿಸೆಂಬರ್ ೧೧೧೭ಕ್ಕೆ ಸರಿಹೊಂದುತ್ತದೆ. ಈ ವೇಳೆಗೆ ಒಂದನೆಯ ನರಸಿಂಹನೂ ಹುಟ್ಟಿರಲಿಲ್ಲ. ಆದ್ದರಿಂದ ಈ ಶಾಸನವು ಶಾಸನೋಕ್ತ ಕಾಲಕ್ಕಿಂತ ಬಹು ಈಚೆಗೆ ಹುಟ್ಟಿಕೊಂಡಿತೆಂಬುದು ಸ್ಪಷ್ಟ. ಇದನ್ನು ಅದೇ ಸ್ಥಳದಲ್ಲಿ ಕಂಡರಿಸಿದ ವೀರಬಲ್ಲಾಳನ ಕಾಲದ ತಿನ ೧೫೦ ರೊಂದಿಗೆ ಸೇರಿಸಿಕೊಂಡು ಓದಬೇಕು ಈ ತಿನ ೧೫೦ನೆಯ ಶಾಸನವು ವಿಜಯ ಸಂವತ್ಸರದ ಶ್ರಾವಣಮಾಸದಲ್ಲಿ ಅರಸನ ಪಟ್ಟಾಭಿಷೇಕದ ಸಂದರ್ಭದಲ್ಲಿ ಪಧಿನಾಡಿನಲ್ಲಿನ ಇಳಮುಱುದೂರನ್ನು ಕೀರ್ತಿ ನಾರಾಯಣದೇವರಿಗೆ ದತ್ತಿ ಬಿಟ್ಟುದನ್ನು ತಿಳಿಸುತ್ತದೆ. ಈ ಸಂವತ್ಸರವು ಇಮ್ಮಡಿ ಬಲ್ಲಾಳ ಮತ್ತು ಮುಮ್ಮಡಿ ಬಲ್ಲಾಳರಿಬ್ಬರ ಆಳಿಕೆಯ ಕಾಲದಲ್ಲಿಯೂ ಬರುತ್ತದೆ. ಆದರೆ ಇಮ್ಮಡಿ ಬಲ್ಲಾಳನ ಪಟ್ಟಾಭಿಷೇಕ ನಡೆಯಿತೆಂದು ಬೇರೆ ಆಧಾರಗಳಿಂದ ತಿಳಿದುಬರುವ ಕ್ರಿ.ಶ. ೧೧೭೩ಕ್ಕೆ ಈ ಸಂವತ್ಸರ ಸರಿಹೊಂದುತ್ತಿದ್ದು ಶಾಸನವನ್ನು ಈ ಅರಸನದೆಂದೇ ನಿರ್ಧರಿಸಬೇಕು. ಹಿಂದೆಯೇ ಆಗಿಹೋಗಿದ್ದ ವಿಷಯವನ್ನು ತಿಳಿಸುವ ತಿನ ೧೫೧ನೆಯ ಶಾಸನವನ್ನು ಈ ಸಂದರ್ಭದಲ್ಲಿ ಕಂಡರಿಸಿರುವುದು ಸ್ಪಷ್ಟ. ತೇದಿಯ ವಿವರಗಳನ್ನೆಲ್ಲ ಕೊಟ್ಟಿರುವುದರಿಂದ ಅಧಿಕೃತ ದಾಖಲೆಗಳ ಆಧಾರದಿಂದ ಇದನ್ನು ಕಂಡರಿಸಿರಬೇಕೆಂದು ಸುಲಭವಾಗಿ ಊಹಿಸಬಹುದು.

ತ್ರಿಭುವನಮಲ್ಲ, ಭುಜಬಳ ವೀರಗಂಗನೆಂಬ ಬಿರುದುಗಳನ್ನು ಪಡೆದ ಪೊಯ್ಸಳದೇವನ ಅದೇ ಗ್ರಾಮದ ಶಾಸನ (ತಿನ ೧೬೭)ದಲ್ಲಿ ಅವನು ತಟಿಕ್ಕಾಡು ಕೊಙ್ಗು ನಙ್ಗಲಿ ಉಚ್ಚಙ್ಗಿ ಪಾನುಙ್ಗಲ್ಲುಗಳನ್ನು ಗೆದ್ದನೆಂದು ವರ್ಣಿತ ನಾಗಿದ್ದಾನೆ. ಈ ವಿವರಗಳ ಆಧಾರದಿಂದ ರಾ. ನರಸಿಂಹಾಚಾರ್ಯರು ಗುರುತಿಸಿರುವಂತೆ ಇದರಲ್ಲಿ ಉಕ್ತನಾದ ಅರಸನು ವಿಷ್ಣುವರ್ಧನನೆಂದೇ ಹೇಳಬೇಕು. ಆದರೆ ರಾ. ನರಸಿಂಹಾಚಾರ್ಯರು ಈ ಶಾಸನದ ಕಾಲ ಕ್ರಿ.ಶ. ೧೧೪೧ ಎಂದಿದ್ದಾರೆ. ಇದು ತಲಕಾಡಿನ ಕೀರ್ತಿನಾರಾಯಣ ದೇವಾಲಯದಲ್ಲಿ ದೇವಿಯ ಮೂರ್ತಿಯನ್ನು ದುರ್ಮುಖಿಸಂವತ್ಸರದಲ್ಲಿ ಪ್ರತಿಷ್ಠೆ ಮಾಡಿಸಿದುದಕ್ಕಾಗಿ ಆ ದೇವಾಲಯದ ಸೇವೆಯಲ್ಲಿದ್ದ ವರನ್ತರುಂಪೆರುಮಾಳ್ ಅಥವ ಕೀರ್ತಿನಾರಾಯಣ ತಲೈಕ್ಕೋಲಿ ಎಂಬ ದೇವದಾಸಿ (ತಲೈಯಿಲಾಳ್)ಗೆ ಮೊದಲ ಪ್ರಸಾದದ ಮರಿಯಾದೆ ಸಲ್ಲುವಂತೆ ಹಾಕಿಕೊಟ್ಟಿರುವ ಶಾಸನ. ಕೀರ್ತಿ ನಾರಾಯಣದೇವರ ಪ್ರತಿಷ್ಠೆಯಾದುದು ಕ್ರಿ.ಶ. ೧೧೧೭ಕ್ಕೆ ಸರಿಹೊಂದುವ ಹೇವಿಳಂಬಿಸಂವತ್ಸರದಂದು ಎಂಬುದು ಮೇಲೆಯೇ ತಿಳಿದುಬಂದಿದೆ. ಇದರ ಹಿಂದಿನ ವರ್ಷವಾದ ದುರ್ಮುಖಿ ಕ್ರಿ.ಶ. ೧೧೧೬–೧೭ಕ್ಕೆ ಸರಿಹೊಂದುತ್ತದೆ. ಆದರೆ

ಈ ದುರ್ಮುಖಿಯಂದು ದೇವಿಯ ಮೂರ್ತಿ ಪ್ರತಿಷ್ಠೆಯಾಗಿರುವುದು ಅಸಂಭವ. ರಾ. ನರಸಿಂಹಾಚಾರ್ಯರು ಈ ಶಾಸನವನ್ನು ೧೧೪೧ರ ಕಾಲದ್ದೆಂದು ಹೇಗೆ ಗೊತ್ತುಪಡಿಸಿದರೆಂಬುದು ತಿಳಿಯದು. ಮೇಲೆ ಹೇಳಿದಂತೆ ಶಾಸನದಲ್ಲಿ ಪೊಯ್ಸಳದೇವನಿಗೆ ಅನ್ವಯಿಸಲಾಗಿರುವ ಬಿರುದುಗಳಿಂದ ಅರಸನು ವಿಷ್ಣುವರ್ಧನನೆಂದು ಗುರುತಿಸಲಾಗಿದೆ. ಆದರೆ ೧೧೧೬-೧೭ರ ವೇಳೆಗೆ ಈ ಶಾಸನದಲ್ಲಿ ಹೇಳಲಾದ ಸ್ಥಳಗಳನ್ನೆಲ್ಲ ಆತನು ಇನ್ನೂ ಗೆದ್ದಿರಲಿಲ್ಲ. ಅಲ್ಲದೆ ಕೀರ್ತಿನಾರಾಯಣ ದೇವರ ಪ್ರತಿಷ್ಠೆಯೇ ಆಗಿರಲಿಲ್ಲ. ದುರ್ಮತಿ ಸಂವತ್ಸರಕ್ಕೆ ಬದಲಾಗಿ ದುರ್ಮುಖಿ ಎಂಬುದು ತಪ್ಪಾಗಿರಬೇಕೆಂದು ಭಾವಿಸಿ ನರಸಿಂಹಾಚಾರ್ಯರು ಶಾಸನದ ಕಾಲವನ್ನು ೧೧೪೧ ಎಂದು ನಿರ್ಧರಿಸಿರಬಹುದಾದ ಸಾಧ್ಯತೆ ಇದೆ. ಆಶ್ಚರ್ಯವೆಂದರೆ ಎಪಿಗ್ರಾಫಿಯ ಕರ್ನಾಟಿಕದ ಸಂಪುಟ ೧೪ ರಲ್ಲಿಯೂ ಶಾಸನದ ವರ್ಷವನ್ನು ದುರ್ಮುಖಿಯೆಂದೇ ಓದಿದ್ದು ಅದು ಕ್ರಿ.ಶ. ೧೧೪೧ ಎಂದು ತಿಳಿಸಿದೆ. ಶಾಸನ ವಿಷ್ಣುವರ್ಧನನದೇ ಆದಲ್ಲಿ ಈ ಬದಲಾವಣೆ ಸೂಕ್ತವಾಗಿ ತೋರುತ್ತದೆ. ಹಾಗಿಲ್ಲದಿದ್ದಲ್ಲಿ ದುರ್ಮುಖಿಯು ಇಮ್ಮಡಿ ಬಲ್ಲಾಳನ ಆಳಿಕೆಯ ಕಾಲದ ಕ್ರಿ.ಶ. ೧೧೭೬-೭೭ಕ್ಕೆ ಸರಿಹೊಂದುತ್ತದೆ. ಇದು ಸರಿಯಾದರೆ ಶಾಸನೋಕ್ತ ಅರಸ ಇಮ್ಮಡಿ ಬಲ್ಲಾಳನೆಂದೇ ಭಾವಿಸಬೇಕಾಗುತ್ತದೆ. ಹಾಗಾದಲ್ಲಿ ಇಮ್ಮಡಿ ಬಲ್ಲಾಳನೇ ಈ ಶಾಸನವನ್ನು ಹಾಕಿಸಿದನೆನ್ನಬೇಕಾಗುತ್ತದೆ.

ಕಂಬವೊಂದರಮೇಲೆ ತಮಿಳು ಗ್ರಂಥಾಕ್ಷರಗಳಲ್ಲಿ ಕಂಡರಿಸಿರುವ ತಿನ ೧೫೭ನೆಯ ಶಾಸನವು ಪರನ್ತರುಂ ಪೆರುಮಾಳ್ ತಲೈಕ್ಕೋಲಿಯು ಅದೇ ದೇವರಿಗೆ ಹೂವಿನ ತೋಟಕ್ಕಾಗಿ ಭೂಮಿಯನ್ನುಕೊಂಡು ದತ್ತಿ ಬಿಟ್ಟುದನ್ನು ತಿಳಿಸುತ್ತದೆ. ಈ ದಾಸಿಯು ಮೇಲೆ ತಿಳಿಸಿದವಳೇ ಆಗಿರಬಹುದು. ಆದ್ದರಿಂದ ಈ ಶಾಸನವನ್ನೂ ವಿಷ್ಣುವರ್ಧನನ ಆಳಿಕೆಯ ಕಾಲಕ್ಕೇ ಸೇರಿಸಬೇಕಾಗುತ್ತದೆ. ಈ ದತ್ತಿಯನ್ನೂ ಬಹುಶಃ ಕ್ರಿ.ಶ.ಸು. ೧೧೪೧ ರಲ್ಲಿಯೇ ಬಿಟ್ಟಿರಬಹುದು.

ವೈ ೨೦೭ನೆಯ ಶಾಸನದ ಕಾಲ ಕ್ರಿ.ಶ. ೧೧೨೧ನೆಯ ನವೆಂಬರ್ ೧೬. ವಿಷ್ಣುವರ್ಧನನ ಈ ಶಾಸನ ಕುತೂಹಲಕರವಾದುದು. ಹೊಯ್ಸಳದೇವ ಎಂದು ಕರೆಯಲ್ಪಟ್ಟ ಈ ರಾಜನಿಗೆ ಕುಲೋತ್ತುಂಗಚೋಳಭುಜಬಳವೀರಗಂಗ ಎಂಬ ಬಿರುದಿದ್ದು, ತೀರ ಅಪರೂಪವಾಗಿ ಬರುವ ಈ ಬಿರುದು ಅವನು ಚೋಳರನ್ನು ಸೋಲಿಸಿ ತಲಕಾಡು ಮತ್ತು ಅದರ ಸುತ್ತಮುತ್ತಲ ಪ್ರಾಂತವನ್ನು ಗೆದ್ದುದನ್ನು ಸೂಚಿಸುತ್ತದೆ. ಈ ಶಾಸನದಲ್ಲಿ ಅವನು ತಲಕಾಡಿನಲ್ಲಿದ್ದು ಗಂಗವಾಡಿ ತೊಂಭತ್ತಾಱುಸಾಸಿರವನ್ನು ಆಳುತ್ತಿದ್ದನೆಂದೂ ಹೇಳಿದೆ. ಮಹಾಪ್ರಧಾನ ದಂಡನಾಯಕ ಗಂಗಪಯ್ಯನು ಸೋವಣ ದಂಡನಾಯಕನಿಗೆ ಪರೋಕ್ಷವಿನಯಕ್ಕಾಗಿ ಹಾದರಿವಾಗಿಲಬೀಡಿನಲ್ಲಿ ಬಸದಿಯನ್ನು ಕಟ್ಟಿಸಿ ಗ್ರಾಮವೊಂದನ್ನು ದತ್ತಿ ಬಿಟ್ಟುದನ್ನು ತಿಳಿಸುತ್ತದೆ ಈ ಶಾಸನ. ಸೋವಣದಂಡನಾಯಕನು ಗಂಗಪಯ್ಯನ ತಮ್ಮನೆಂದು ತೋರುತ್ತದೆ. ಶಾಸನದಲ್ಲಿ 'ಗಂಗಪಯ್ಯಗಳು ತಮ್ಮ ಸೋವಣದಂಡನಾಯಕರಿಗೆ' ಎಂದಿದೆ. ಇಲ್ಲಿ ತಮ್ಮ ಎಂದರೆ ಕಿರಿಯ ಸೋದರನೆಂದು ಅರ್ಥೈಸಬೇಕು. ಈ ಪದವನ್ನು ಪ್ರೀತಿಯನ್ನು ಸೂಚಿಸುವುದಕ್ಕಾಗಿಯೂ ಬಳಸಿರಬಹುದು. ಅದಕ್ಕೆ ತಮ್ಮ ಅಥವ ಅಧೀನ ಅಧಿಕಾರಿ ಎಂಬ ಅರ್ಥವನ್ನು ಎಂ. ಎಚ್. ಕೃಷ್ಣ ಅವರು ಸೂಚಿಸಿದ್ದಾರೆ. ಗಂಗಪಯ್ಯ ಶ್ರದ್ಧಾವಂತ ಜೈನನಾಗಿದ್ದ, ಪ್ರಸಿದ್ಧ ದಂಡನಾಯಕನೂ ಆಗಿದ್ದ ಗಂಗರಾಜನೆಂದು ಗುರುತಿಸಲಾಗಿದೆ. ಈ ಮೇಲಿನ ವಾದವನ್ನೊಪ್ಪಿಕೊಂಡಲ್ಲಿ ಸೋವಣ್ಣ ದಂಡನಾಯಕನು ಗಂಗರಾಜನ ತಮ್ಮನಾಗಿದ್ದಿರಬಹುದು.

ಕ್ರಿ.ಶ. ೧೧೨೬-೨೭ನೆಯ ವರ್ಷದ ಕೃನ ೮, ಕ್ರಿ.ಶ. ೧೧೨೭-೨೮ರ ವೈ ೧೫೫ ಮತ್ತು ಕ್ರಿ.ಶ. ೧೧೩೩ರ ಕೃನ ೧೧೧ ಈ ಮೂರು ಶಾಸನಗಳಲ್ಲಿಯೂ ರಾಜನನ್ನು ಪೊಯ್ಸಳದೇವ ಅಥವ ಹೊಯ್ಸಳದೇವನೆಂದು ಕರೆದಿದೆ. ಆತನು ತಲಕಾಡುಗೊಂಡ ಎಂಬ ಬಿರುದಾಂಕಿತನಾಗಿದ್ದಾನೆ. ಅವನ ಇತರ ಗೆಲುವುಗಳ ಪ್ರಸ್ತಾಪ ಇಲ್ಲಿಲ್ಲ. ಅವನು ಯಾದವಪುರ ಅಥವ ತೊಣ್ಣೂರಿನಿಂದ ಆಳುತ್ತಿದ್ದುದಾಗಿ ಅವುಗಳಲ್ಲೊಂದು (ವೈ ೧೫೫) ತಿಳಿಸುತ್ತದೆ. ತಿನ ೬೯ ಮತ್ತು ಕೃನ ೯ರಲ್ಲಿ ವಿಷ್ಣುವರ್ಧನನ ಹೆಸರಿದೆ. ಮೊದಲನೆಯದರಲ್ಲಿ ತಲಕಾಡುಗೊಂಡ ಎಂಬ ಬಿರುದಿದ್ದರೆ, ಎರಡನೆಯದು ವೀರಗಂಗ ಎಂಬ ಬಿರುದನ್ನು ಮಾತ್ರ ಕೊಟ್ಟಿದೆ. ತನ್ನ ರಾಜ್ಯದ ಇತರ ಭಾಗಗಳ ಶಾಸನಗಳಲ್ಲಿ ಉಪಯೋಗಿಸುತ್ತಿದ್ದಂತೆ ತನ್ನ ಎಲ್ಲ ಬಿರುದುಗಳನ್ನು ಈ ದಕ್ಷಿಣಭಾಗದ ಶಾಸನಗಳಲ್ಲಿ ಉಪಯೋಗಿಸುತ್ತಿರಲಿಲ್ಲವೆಂಬುದನ್ನು ಇದು ಸೂಚಿಸುತ್ತದೆ. ಬೆಳ್ವಲದ ಬಾದಾವಿಯ ಹುವಿಯರ ನಾರಸಿಂಹದೇವನು ಬಿಟ್ಟ ದತ್ತಿಯನ್ನು ತಿನ ೬೯ ತಿಳಿಸುತ್ತದೆ. ಬಾದಾವಿಯು ಬಿಜಾಪುರ ಜಿಲ್ಲೆಯಲ್ಲಿರುವ ಬಾದಾಮಿ ಎಂಬುದರಲ್ಲಿ ಸಂಶಯವಿಲ್ಲ. ಗಂಗರ ಶ್ರೀಪುರುಷನು ವಾತಾಪಿ ಅಥವಾ ಬಾದಾಮಿಯ ವಾಸ್ತವ್ಯನೊಬ್ಬನಿಗೆ ದತ್ತಿಬಿಟ್ಟುದರ ಪ್ರಸ್ತಾಪ ಈ ಮೊದಲೇ ಬಂದಿದೆ. ನಾಲ್ಕು ಶತಮಾನಗಳನಂತರ ಆ ಸ್ಥಳದ ಇನ್ನೊಬ್ಬ ನಿವಾಸಿಯು ದಾನಮಾಡುತ್ತಿರುವುದು ಇಲ್ಲಿ ಕಂಡುಬರುತ್ತದೆ. ಈತನೋ ಈತನ ಪೂರ್ವಜರೋ ಇಲ್ಲಿ ಬಂದು ನೆಲೆಸಿರಬಹುದು.

ಸುಮಾರು ೧೨ನೆಯ ಶತಮಾನಕ್ಕೆ ಸೇರಿದ ಚಿಕ್ಕಹನಸೋಗೆಯ ಶಾಸನ (ಕೃಸ ೪೦)ದಲ್ಲಿ ಹೋಜಾಂಬಿಕೆಯ

ಮಗನಾದ ನಾರಿಗನೂ ಮೋಚವ್ವೆಯ ಮಕ್ಕಳಾದ ಮಾದಯನಾಯಕ ಮತ್ತು ಆರಿಯಮರು ಹೊಸವೀಡಿನ ಕದನದಲ್ಲಿ ಪೆರ್ಮಾಡಿಯ ವಿರುದ್ಧ ಕಾದಿ ಸತ್ತರೆಂದಿದೆ. ಈ ಕದನ ಹೊಯ್ಸಳ ವಿಷ್ಣುವರ್ಧನ ಹಾಗೂ ಚಾಲುಕ್ಯ ಪೆರ್ಮಾಡಿ (ಆರ್ವಡಿ ವಿಕ್ರಮಾದಿತ್ಯ)ಯ ನಡುವೆ ನಡೆದುದೆಂಬುದು ತಿಳಿದಿದೆ. ಪ್ರಸ್ತುತ ಶಾಸನ ಆದರಲ್ಲಿ ಭಾಗವಹಿಸಿದ ಕೆಲವು ವೀರರನ್ನು ಹೆಸರಿಸಿದೆ. ಶಾಸನ ಹೊಯ್ಸಳ ವಿಷ್ಣುವರ್ಧನನ ಕಾಲದ್ದಿರಬಹುದು.

ಈ ಸಂಪುಟದಲ್ಲಿರುವ ಒಂದನೆಯ ನರಸಿಂಹನಿಗೆ ಸೇರಿದ ಶಾಸನ ಕುಮಾರಬೀಡಿನಲ್ಲಿರುವ ವ್ಯೈ ೨೧೧ ಮಾತ್ರ. ಬಹುಮಟ್ಟಿಗೆ ತ್ರುಟಿತವಾದ ಈ ಶಾಸನ ಕ್ರಿ.ಶ. ೧೧೬೦–೬೧ಕ್ಕೆ ಸೇರಿದ್ದು, ಸರ್ವಾಧಿಕಾರಿ, ದಂಡನಾಯಕ ಬಿಟ್ಟಿಮಯ್ಯನನ್ನು ಹೆಸರಿಸುತ್ತದೆ. ಈತನು ಒಂದನೆಯ ನರಸಿಂಹನ ಪ್ರಸಿದ್ಧನಾದ ಮಂತ್ರಿ ಮತ್ತು ದಂಡನಾಯಕ. ಇದೇ ಕಾಲದ ಹರಳುಕೋಟೆಯ ಶಾಸನದಲ್ಲಿ[1] ಈತನು ದಾನಿಗಳಲ್ಲೊಬ್ಬನಾಗಿ ಕಾಣಿಸಿಕೊಂಡಿದ್ದಾನೆ. ಕ್ರಿ.ಶ. ೧೧೬೨ರ ಧರ್ಮಾಪುರದ ಶಾಸನವು[2] ಉಲ್ಲೇಖಿಸುವ ಕರ್ನಾಟವಂಶಕ್ಕೆ ಸೇರಿದ ದಂಡನಾಯಕ ಬಿಟ್ಟಿಮಯ್ಯನೂ ಅದೇ ಹೆಸರಿನ ಮರಿಯಾನೆ ದಂಡನಾಯಕನ ಮಗನೂ ಒಬ್ಬನೇ ಇರಬಹುದೇ ಎನ್ನುತ್ತಾರೆ ಕೊಎಲ್ಹೊ ಅವರು. ಪ್ರಕೃತ ಶಾಸನದಲ್ಲಿ ಈ ದಂಡನಾಯಕನ ಬಗ್ಗೆ ವಿವರಗಳಿಲ್ಲ. ತುಂಡುಶಾಸನವಾದುದರಿಂದ ಶಾಸನದ ಅಭಿಪ್ರಾಯವೂ ಸ್ಪಷ್ಟವಾಗಿಲ್ಲ.

ಆದರೆ ಇದೇ ಗ್ರಾಮದ ಕ್ರಿ. ಶ. ೧೧೭೪ರ ಮತ್ತೊಂದು ಶಾಸನದಲ್ಲಿ (ವ್ಯೈ ೨೦೬) ಕಾಣಿಸಿಕೊಳ್ಳುವ ಬಿಟ್ಟೆಯ ಗಾವುಂಡನೂ ಹೆಮ್ಮನಹಳ್ಳಿಯ ಕ್ರಿ. ಶ. ೧೧೭೫ರ ಶಾಸನ (ವ್ಯೈ ೨೧೫)ದಲ್ಲಿ ಪ್ರಸ್ತಾಪಿಸಲ್ಪಟ್ಟ ಬಿಟ್ಟಿಮಯ್ಯನೂ ಇದೇ ಬಿಟ್ಟಿಮಯ್ಯ ದಂಡನಾಯಕನೆಂಬುದು ಸ್ಪಷ್ಟ. ವ್ಯೈ ೨೦೬ರಲ್ಲಿ ಈತನನ್ನು ಮಹಾಪ್ರಧಾನ, ಸರ್ವಾಧಿಕಾರಿ, ದಂಡನಾಯಕ ಎಂದು ವರ್ಣಿಸಲಾಗಿದೆ. ಲಿಪಿಯ ಆಧಾರದ ಮೇಲೆ ಮತ್ತು ಈತನನ್ನು ಬಿಟ್ಟಿಮಯ್ಯನೆಂದು ಗುರುತಿಸಿರುವುದರಿಂದ ಈ ಶಾಸನವನ್ನು ಬಲ್ಲಾಳನ ಕಾಲದ್ದೆಂದು ನಿರ್ಧರಿಸಿ ಕಾಲವನ್ನು ಕ್ರಿ.ಶ. ೧೧೭೪ನೆಯ ಅಕ್ಟೋಬರ್ ೫ಕ್ಕೆ ಹೊಂದಿಸಿದೆ. ಇದೇ ಸ್ಥಳದಲ್ಲಿರುವ ಕಾಲನಿರ್ದೇಶವಿಲ್ಲದ ಮತ್ತೊಂದು ಶಾಸನ (ವ್ಯೈ ೨೧೨) ವೀರಬಲ್ಲಾಳನ ಆಳಿಕೆಗೆ ಸೇರಿದ್ದು ದಂಡನಾಯಕ ಬಿಟ್ಟಿಮಯ್ಯನ ಸನ್ನಿಧಾನದಲ್ಲಿ ಹಲವರು ಪ್ರಭುಗೌಂಡುಗಳು ತೆರಿಗೆ ವಿನಾಯಿತಿ ನೀಡಿದುದನ್ನು ತಿಳಿಸುತ್ತದೆ. ಇದರಲ್ಲಿನ ಎಲ್ಲ ದಾನಿಗಳ ಹೆಸರುಗಳೂ ಹೆಮ್ಮನಹಳ್ಳಿಯ ಶಾಸನದಲ್ಲಿ (ವ್ಯೈ ೨೧೫) ಕಂಡುಬರುತ್ತವೆ. ಆದ್ದರಿಂದ ಬಿಟ್ಟಿಗಾವುಂಡನು ಬಿಟ್ಟಿಮಯ್ಯನೇ ಆಗಿರಬೇಕು ಮತ್ತು ಇದೇ ಬಿಟ್ಟಿಮಯ್ಯನೇ ಮೇಲೆ ತಿಳಿಸಿರುವ ಒಂದನೆಯ ನರಸಿಂಹನ ಶಾಸನದಲ್ಲಿರುವವನಾಗಿರಬೇಕು.

ಇಮ್ಮಡಿ ಬಲ್ಲಾಳನ ರಾಣಿಯಾದ ಬಮ್ಮಲದೇವಿಯ ತಂದೆ ಮತ್ತು ಅಣ್ಣ ಇವರ ಹೆಸರುಗಳು ಕ್ರಮವಾಗಿ ಕ್ರಿ. ಶ. ೧೧೮೮ರ ವ್ಯೈ ೨೧೪ ಮತ್ತು ೧೧೯೫–೯೬ರ ವ್ಯೈ ೨೧೬ನೆಯ ಶಾಸನಗಳಲ್ಲಿ ವ್ಯಕ್ತವಾಗುತ್ತವೆ. ಆಕೆಯ ತಂದೆ ಮೊಖರಿ ಲಕ್ಕಯ್ಯನು ಮಹಾಪಸಾಯ್ತನಾಗಿದ್ದು ಇಮ್ಮಡಿ ಬಲ್ಲಾಳನ ಪರಮವಿಶ್ವಾಸಿಯೂ ಆಗಿದ್ದನೆಂದು ಹೇಳಿದೆ. ಆಕೆಯ ಅಣ್ಣ ಮೈಲನಾಯಕನು ಶಂಕರದೇವರ ದೇವಾಲಯದೊಳಗಣ ನಾರಣದೇವರ ಸೊಡರೆಣ್ಣೆಗಾಗಿ ಎತ್ತು ಗಾಣದ ಸುಂಕವನ್ನು ಬಿಟ್ಟಿದ್ದಾನೆ. ಅದೇ ಹೆಮ್ಮನಹಳ್ಳಿಯ ಮತ್ತೊಂದು ಶಾಸನದಲ್ಲಿಯೂ (ವ್ಯೈ ೨೧೯) ಬಮ್ಮಲದೇವಿಯ ಹೆಸರು ಬರುತ್ತದೆ. ಕ್ರಿ. ಶ. ೧೧೯೩ರ ವೀರಗಲ್ಲಿನ ಮೇಲಿರುವ ಈ ಅಪೂರ್ಣ ಶಾಸನವು ಬಮ್ಮಲದೇವಿಯು ಅಧಿಕಾರ ನಡೆಸುತ್ತಿದ್ದಂತೆ ಸೂಚಿಸುತ್ತದೆ. ರಾಜ್ಯದ ಆಡಳಿತದಲ್ಲಿ ಬಹುಶಃ ಆಕೆ ಪಾಲುಗೊಂಡಿದ್ದಿರಬೇಕು ಅಥವಾ ಆಕೆ ಈ ಊರಿನವಳಾಗಿದ್ದು ಇದರ ಸುತ್ತಮುತ್ತಲ ಪ್ರದೇಶವು (ಉಂಬಳಿಯಾಗಿ ?) ಆಕೆಯ ಆಡಳಿತಕ್ಕೊಳಪಟ್ಟಿರಬೇಕು.

ತುಂಬಲದ ಕ್ರಿ. ಶ. ೧೧೮೦ರ ತಿನ ೪೦, ೪೧—ಇವು ಕನ್ನಡದಲ್ಲಿರುವ ಒಂದೇ ಶಾಸನದ ಎರಡು ಪ್ರತಿಗಳು. ಆದರೆ ತಿನ ೪೧ನ್ನು ಸ್ಥಾನಪತಿ ಅಗತ್ತಿಯಾಣ್ಡಾರ್‌ನ ಮಗ ವಾಚ್ಚಾಣ್ಡೈಯು ತಮಿಳು ಲಿಪಿಯಲ್ಲಿ ಕಂಡರಿಸಿದ್ದು ತಿನ ೪೦ನ್ನು ಹೆಗ್ಗಡೆ ಬಮ್ಮದೇವನ ಅಳಿಯ ನಾಗದೇವನು ಬರೆದಿದ್ದಾನೆ. ಇವುಗಳಲ್ಲಿ ತಿಳಿಸಿರುವಂತೆ ತಿರುಮುಕೂಡಲಿನ ಅಗಸ್ತ್ಯೇಶ್ವರದೇವರಿಗೆ ದತ್ತಿ ಬಿಟ್ಟ ತುಂಬಲ ಮತ್ತು ಅದರ ಮೂರು ಉಪಗ್ರಾಮಗಳನ್ನು ಪಡೆದವನು ಪಿಚ್ಚಜೀಯನ ಮಗ ಅಘುತ್ತಿಜೀಯ. ಶಾಸನದ ಲಿಪಿಕಾರನ ತಂದೆ ಅಗತ್ತಿಯಾಣ್ಡಾರನೇ ಬಹುಶಃ ಈ ಪ್ರತಿಗ್ರಹಿಯಾಗಿರಬಹುದು. ಆಶ್ಚರ್ಯದ ಸಂಗತಿಯೆಂದರೆ ಎರಡನೆಯ ಶಾಸನ ತಮಿಳುಲಿಪಿಯಲ್ಲಿ ಮಾತ್ರ ಇದ್ದು ಲಿಪಿಕಾರನನ್ನು ಕುರಿತಾದ ೬೭, ೬೮ನೆಯ ಸಾಲುಗಳನ್ನು ಬಿಟ್ಟು ಉಳಿದಂತೆ ತಮಿಳು ಭಾಷೆಯಲ್ಲಿಲ್ಲದಿರುವುದು. ಇದರ ಉದ್ದೇಶವೇನೋ ತಿಳಿಯದು.

---

[1] ಅದೇ, ಚಾನ ೨೨೨

[2] ಅದೇ, ಮ ೩೪

ತಿನ ೧೬೨ ತಮಿಳು ಗ್ರಂಥಾಕ್ಷರಗಳಲ್ಲಿರುವ ಸುಂದರವಾದ ಸಂಸ್ಕೃತ ಶಾಸನ. ಇದರಲ್ಲಿ ಸರಸ್ವತೀಕಂಠಾಭರಣ ದೇವನು ರಚಿಸಿದ ಇಮ್ಮಡಿ ಬಲ್ಲಾಳ ಮತ್ತು ಅವನ ಮಗ ಇಮ್ಮಡಿ ನರಸಿಂಹರನ್ನು ಸ್ತುತಿಸಿರುವ ಎರಡು ಪದ್ಯಗಳಿವೆ. ನರಸಿಂಹನನ್ನು ಕುರಿತು ಹಿಂದೆ ಅಚೇತನ ಸ್ತಂಭದಿಂದ ಉದ್ಭವಿಸಿದ ಲಜ್ಜೆಯನ್ನು ಹೋಗಲಾಡಿಸಲು ಈಗ ಬಲ್ಲಾಳನೆಂಬ ಚೇತನಸ್ತಂಭದಿಂದ ನರಸಿಂಹನು ಉದಿಸಿದನು ಎಂದು ಹೊಗಳಿರುವಲ್ಲಿ ಅರಸನನ್ನು ದೇವರಾದ ನರಸಿಂಹನೊಡನೆ ಹೋಲಿಸಿದೆ. ಸರಸ್ವತೀಕಂಠಾಭರಣದೇವ ಎಂಬುದು ಕವಿಯ ಹೆಸರಲ್ಲದೆ ಬಿರುದಾಗಿರಬೇಕು. ಹಾಗಿದ್ದಲ್ಲಿ ಕವಿ ಅಜ್ಞಾತನಾಗಿ ಉಳಿಯುತ್ತಾನೆ.

ಜೋಡಿಬಸವನಪುರದ ಸೋಮೇಶ್ವರನ ಶಾಸನ (ತಿನ ೩೬)ದ ಕಾಲ ಕ್ರಿ. ಶ. ೧೨೩೯–೪೦. ತಮಿಳು ಗ್ರಂಥಲಿಪಿ ಮತ್ತು ತಮಿಳು ಭಾಷೆಯಲ್ಲಿರುವ ಈ ಶಾಸನದ ಕೊನೆಯಲ್ಲಿ ಒಂದು ಸಂಸ್ಕೃತ ಪದ್ಯವೂ ಇದೆ. ಮೂಲದಲ್ಲಿ ಇಟ್ಟಿಗೆಯ ಕಟ್ಟಡವಾಗಿದ್ದ ಹರಿಹರ ದೇವಾಲಯವನ್ನು ಕಲ್ಲಿನಿಂದ ಪುನರ್ನಿರ್ಮಾಣ ಮಾಡಿದುದನ್ನು ತಿಳಿಸುವ ಈ ಶಾಸನ ಕುತೂಹಲ ಕರವಾದುದು. ವಾಸುದೇವನು ಕಟ್ಟಿಸಿದ್ದ ಇಟ್ಟಿಗೆಯ ದೇವಾಲಯವು ಜೀರ್ಣವಾಗಿರಲು ಅವನ ಮರಿಮಗ ಕೇಶವದೇವನು ಜೀರ್ಣೋದ್ಧಾರ ಮಾಡಿಸಿದನು; ಜೊತೆಗೆ ಗೋಪುರ, ದುರ್ಗೇಶ್ವರಮುಡೈಯಾರಿಗೆ ಮಕರತೋರಣ, ವೃಷಭದೇವರು ಮತ್ತು ಪಾಕಶಾಲೆಗಳನ್ನು ಸೇರಿಸಿದನು.

ಸೋಮನಾಥಪುರದ ತಿನ ೮೮ ಮುಮ್ಮಡಿ ನರಸಿಂಹನ ಶಾಸನ. ಅವನ ಪ್ರಿಯಪುತ್ರನೆನಿಸಿಕೊಂಡಿದ್ದ ಮಂತ್ರಿಯೂ ದಂಡನಾಯಕನೂ ಆದ ಸೋಮೆಯನು ವಿದ್ಯಾನಿಧಿಪ್ರಸನ್ನ ಸೋಮನಾಥಪುರವೆಂದು ತನ್ನ ಹೆಸರಿನಿಂದ ಅಗ್ರಹಾರ ವೊಂದನ್ನು ಸ್ಥಾಪಿಸಿ ಅಲ್ಲಿನ ದೇವಾಲಯದಲ್ಲಿ ಕೇಶವದೇವರು ಮುಖ್ಯವಾದ ದೇವರುಗಳನ್ನು ಪ್ರತಿಷ್ಠೆಮಾಡಿಸಿದನು. ಪೂಜೆ ಮತ್ತು ಹಲವು ಕೈಂಕರ್ಯಗಳಿಗಾಗಿ ದೊರೆಯು ೩೦೦೦ (ಗದ್ಯಾಣದ ?) ಕರವನ್ನು ದತ್ತಿಬಿಟ್ಟಿದ್ದಾನೆ. ಈ ದತ್ತಿಯನ್ನು ಸೋಮೆಯದಂಡನಾಯಕನ ಅಳಿಯಂದಿರಾದ ಮಲ್ಲಿದೇವ ಚಿಕ್ಕಕೇತಯರಿಬ್ಬರೂ ವಿಭಾಗಿಸಿ ಅಮೃತಪಡಿ, ಉಪಬ್ರಯಕ್ಕೂ ನಿಯೋಗಿಗಳ ಜೀವಿತವರ್ಗಕ್ಕೂ ಹಂಚಿದುದನ್ನು ವಿವರವಾಗಿ ಕೊಟ್ಟಿದೆ. ಕರದಿಂದ ಒಟ್ಟು ಆದಾಯ ಬರುವುದು ೩೩೮೭ ಗದ್ಯಾಣ, ೩ ಹಣ; ೭೦ ದೇವತೆಗಳ ದೇವದಾನದಿಂದ ಬರುವ ಸಿದ್ಧಾಯ ೨೧೧ ಗದ್ಯಾಣ. ೭೦ ದೇವತೆಗಳ ವಿವರ ಹೀಗಿದೆ: ವಿದ್ಯಾನಿಧಿಪ್ರಸನ್ನ ಸೋಮನಾಥಪುರದ ಗ್ರಾಮಮಧ್ಯದ ದೇವಾಲಯದಲ್ಲಿ ಪ್ರಸನ್ನ ಕೇಶವ, ಗಂಡಭೇರುಂಡ ಗೋಪಾಲ ಮತ್ತು ವರದಜನಾರ್ದನ; ಅದೇ ದೇವಾಲಯದ ಪ್ರಾಕಾರದಲ್ಲಿರುವ ಬ್ರಹ್ಮಾದಿದೇವರು ೬, ಕೇಶವಾದಿದೇವರು ೧೨, ಹಂಸನಾರಾಯಣಾದಿದೇವರು ೧೨, ಮತ್ಸ್ಯಾದಿದೇವರು ೧೦, ಸಂಕರ್ಷಣಾದಿದೇವರು ೧೨, ಕೃಷ್ಣಾವತಾರದೇವರು ೧೨, ಕಾವೇರಿತೀರದಲ್ಲಿರುವ ಲಕ್ಷ್ಮೀನರಸಿಂಹ ಮತ್ತು ಯೋಗನಾರಾಯಣ ಮತ್ತು ಮಳವಳ್ಳಿಯ ಸಾರಂಗಪಾಣಿದೇವರು. ವೃತ್ತಿಗೆ ೪೫ ಗದ್ಯಾಣಗಳಂತೆ ೧೪ ವೃತ್ತಿಗಳಿಂದ ಬರುವ ಆದಾಯ ೬೩೦ ಗದ್ಯಾಣ; ೪ ತೋಟಗಳು ೪ ಗ್ರಾಮಗಳಿಂದ ೮೦ ಗದ್ಯಾಣ; ಸಲಗೆಗೆ ಒಂದು ಗದ್ಯಾಣದಂತೆ ೨೦೦ ಸಲಗೆ ಗದ್ದೆಗೆ ೨೦೦ ಗದ್ಯಾಣ; ಯೆಡದೊರೆನಾಡಿನ ಹಾದರಿವಾಗಿಲಿಂದ ೧೫೦ ಗದ್ಯಾಣ; ಬಡಗರೆನಾಡಿನ ಮೂಜೆಯಹಳ್ಳಿಯಿಂದ ೧೯೯೭ ಗದ್ಯಾಣ ೩ ಹಣ; ಸೀಗಲನಾಡ ಮಾರದೇವನು ಕೊಟ್ಟ ಹೊಂಗೆಯಹಳ್ಳಿ ಮಾರೆಯಹಳ್ಳಿಗಳಿಂದ ೧೨೦ ಗದ್ಯಾಣ—ಒಟ್ಟು ೩೩೮೭ ಗದ್ಯಾಣ ೩ ಹಣ.

ಹಲವು ಬಗೆಯ ಕೈಂಕರ್ಯಗಳಿಗಾಗಿ ನಡೆಸಬೇಕಾಗಿದ್ದ ವೆಚ್ಚದ ವಿವರವನ್ನು ಶಾಸನ ಕೊಡುತ್ತದೆ. ಅಮೃತಪಡಿಗೆ ನಿತ್ಯಪಡಿ ಅಕ್ಕಿ ೫ ಸಲಗೆ ೧೬ ಕೊಳಗ ೧ ಬಳ್ಳ ಮತ್ತು ೩ ಮಾನದಂತೆ, ಜೊತೆಗೆ ಹಬ್ಬ ಹೆಚ್ಚುಕಟ್ಟಳೆಗಳಿಗೆ ಅಧಿಕಪಡಿಯೂ ಸೇರಿ, ವರ್ಷವೊಂದಕ್ಕೆ ಒಟ್ಟು ೫೫೫೫ ಸಲಗೆ ೧೪ ಕೊಳಗ ೧ ಬಳ್ಳ ನೆಲ್ಲು ಬೇಕಾಗುತ್ತಿತ್ತು. ಇದರ ಬೆಲೆ ೫ ಸಲಗೆಗೆ ೧ ಗದ್ಯಾಣದಂತೆ ೧೧೧೧ ಗದ್ಯಾಣ ಅಡ್ಡ–ಬೇಳೆ ಹಣ. ಇದೇ ರೀತಿ ಎಣ್ಣೆ, ಎಳ್ಳು, ತುಪ್ಪ, ಮೊಸರು, ಹೆಸರು, ಉಪ್ಪು, ಬೇಳೆ, ಮೆಣಸು, ಗೋಧಿ ಮುಂತಾದುವಕ್ಕೂ ಬೆಲೆಯನ್ನು ಲೆಕ್ಕಹಾಕಿರುವುದಲ್ಲದೆ ವೈಷ್ಣವರು, ಆಚಾರ್ಯರು, ನಂಬಿಗಳು, ಪರಿಚಾರಕರು, ಬಾಣಸಿಗರು ಮುಂತಾದ ಜೀವಿತವರ್ಗಕ್ಕೆ ಆಗುವ ವೆಚ್ಚದ ವಿವರಗಳೂ ಇವೆ. ಈ ಎಲ್ಲ ವಿವರಗಳನ್ನೂ ತಿಳಿಸಿರುವ ಶಾಸನದ ಕಡೆಯಲ್ಲಿ ಒಟ್ಟು ವೆಚ್ಚ ೩೪೦೨ ಗದ್ಯಾಣ ೩ ಹಣ ಎಂದಿದೆ. ಕೊಟ್ಟಿರುವ ವೆಚ್ಚಗಳ ವಿವರ ಈ ಮೊತ್ತಕ್ಕೆ ಸರಿಹೊಂದುತ್ತದೆ. ಆದರೆ ಈ ಮೊತ್ತ ಆಯದ ಮೊತ್ತವಾದ ೩೩೮೭ ಗದ್ಯಾಣ, ೩ ಹಣಕ್ಕಿಂತ ೧೫ ಗದ್ಯಾಣ ಹೆಚ್ಚು.

ಶಾಸನದಲ್ಲಿ ಎರಡು ತೇದಿಗಳಿವೆ. ೧) ಕ್ರಿ.ಶ. ೧೨೭೯ ಜೂನ್ ೧೨ ಮತ್ತು ೨) ಕ್ರಿ.ಶ. ೧೨೮೬ ಸೆಪ್ಟೆಂಬರ್ ೧೨. ಮೊದಲನೆಯದು ರಾಜನು ದತ್ತಿ ಬಿಟ್ಟ ಕಾಲ. ಸೋಮೆಯದಂಡನಾಯಕನ ಅಳಿಯಂದಿರು ಇದರ ಉತ್ಪತ್ತಿಯನ್ನು ಬೇರೆಬೇರೆ ವೆಚ್ಚಗಳಿಗಾಗಿ ಹಂಚಿದುದು ಮೇಲ್ಕಂಡಂತೆ ಇದಾದ ಏಳು ವರ್ಷಗಳ ನಂತರವೇ.

ಅದೇ ಸ್ಥಳದ ಅದೇ ಕಾಲದ ತಿನ ೯೬ ಶೈವದೇವಾಲಯಗಳಿಗೆ ಬಿಟ್ಟ ಇಂಥದೇ ದತ್ತಿಯನ್ನು ತಿಳಿಸುತ್ತದೆ.

ಇದಕ್ಕಾಗಿ ಬಿಟ್ಟ ದತ್ತಿಯ ಒಟ್ಟು ವರಮಾನ ೨೫೫೪ ಗದ್ಯಾಣವನ್ನೂ ಇದೇ ರೀತಿ ಹಲವು ವೆಚ್ಚಗಳಿಗಾಗಿ ಹಂಚಿಕೊಟ್ಟಿದೆ. ಆದರೆ ಶಾಸನದ ಕಡೆಯಭಾಗ ಒಡೆದುಹೋಗಿದ್ದು ಕೆಲವು ವಿವರಗಳು ಮೂರಿಯದಂತಾಗಿವೆ. ದಂಡನಾಯಕನು ಬಿಟ್ಟ ಒಟ್ಟು ೨೧ ವೃತ್ತಿಗಳಲ್ಲಿ ೧೪ ವೃತ್ತಿಗಳು ವೈಷ್ಣವಸ್ಥಾನಕ್ಕೂ ಉಳಿದ ೭ ವೃತ್ತಿಗಳು ಶೈವಸ್ಥಾನಕ್ಕೂ ಸಲ್ಲುತ್ತವೆ.

ಅದೇ ಸ್ಥಳದಲ್ಲಿರುವ ಕ್ರಿ.ಶ. ೧೨೮೧ರ ತಿನ ೯೧ನೆಯ ಶಾಸನವನ್ನು ಪತ್ರಶಾಸನವೆಂದು ಕರೆದಿದೆ. ಭಾಷೆಯಲ್ಲಿ ಅಲ್ಲಲ್ಲಿ ಅಸ್ಪಷ್ಟತೆಗಳಿರುವುದರಿಂದ ಅದನ್ನು ಸರಿಯಾಗಿ ಅರ್ಥೈಸುವುದು ಕಷ್ಟ. ದೇವಾಲಯಗಳಿಗೆ ಸೇರಿದ್ದ ದೇವದಾನ ಭೂಮಿಗಳನ್ನೊಳಗೊಂಡಂತೆ ಸೋಮನಾಥಪುರದ ೬ ತತ್ತುಗಳಿದ್ದು ಅವುಗಳಲ್ಲಿ ಬಂದೂರ ತತ್ತು ಒಂದು. ಇದರಲ್ಲಿ ವೈಷ್ಣವ ದೇವಾಲಯಗಳಿಗೆ ೧೪ ವೃತ್ತಿಗಳು ಸೇರಿದ್ದುವು. ಇವುಗಳ ಭೂಮಿಯನ್ನೂ ಹಳ್ಳಿಗಳಲ್ಲಿ ದತ್ತಿಬಿಟ್ಟಿರುವ ತೋಟಗಳನ್ನೂ ಹಾದರಿವಾಗಿಲಗ್ರಾಮವನ್ನೂ ೨೦೦ ಸಲಗೆ ದೇವರಕೊಡಗೆಯ ಗದ್ದೆಯನ್ನೂ ಆಚಾರ್ಯರು, ವೈಷ್ಣವರು, ನಂಬಿಯರು ಅನುಭವಿಸಿಕೊಂಡು ಅದಕ್ಕೆ ತೆರಬೇಕಾದ ಸಿದ್ಧಾಯ ೧೦೬೦ ಗದ್ಯಾಣಗಳಿಗೆ ಬದಲಾಗಿ ದೇವಾಲಯದ ಭಂಡಾರಕ್ಕೆ ೫೩೦೦ ಸಲಗೆ ಭತ್ತವನ್ನು ಅಳೆಯಬೇಕೆಂದು ನಿಗದಿಯಾಗಿತ್ತು ಮತ್ತು ಆ ಸ್ಥಳಗಳಿಗೆ ಅದ್ದಿಕ, ಕೋಲುಕಾರ ಮೊದಲಾದ ಅಧಿಕಾರಿಗಳು ಹೊಗಸಲ್ಲ ಎಂದೂ ಕಟ್ಟಳೆಯಾಗಿತ್ತು. ಕೆಲವು ಸಂಸ್ಕೃತ ಶಾಸನಗಳಲ್ಲಿ ರಾಜರು ದಾನಿಗಳಿಗೆ ಕೊಟ್ಟ ವಿಶೇಷ ರಕ್ಷಣೆ 'ಅಚಟಭಟಪ್ರವೇಶ' ದಂತೆಯೇ ಇದು. ಅದ್ದಿಕ ಎಂಬುದು ಅಧ್ಯಕ್ಷ ಎಂಬುದರ ರೂಪಾಂತರವಾಗಿದ್ದು ಅವನು ಒಂದು ಇಲಾಖೆಯ ಅಧಿಕಾರಿಯಾಗಿದ್ದನು. ಅಧಿಕಾರಿಗಳ ಪಟ್ಟಿಯಲ್ಲಿ ಅವನೂ ಸೇರಿದ್ದಾನೆ.[1] ಕೋಲುಕಾರನು ಕೈಯಲ್ಲಿ ಕೋಲು ಹಿಡಿದಿರುತ್ತಿದ್ದ ಸೇವಕ. ಭೂಮಿಯ ತೆರಿಗೆಯನ್ನು ಗೊತ್ತುಪಡಿಸಿ ವಸೂಲುಮಾಡಲು ಊರೂರು ತಿರುಗುವ ಕಂದಾಯದ ಇಲಾಖೆಯ ಅಧಿಕಾರಿಗಳಿವರೆಂದು ತೋರುತ್ತದೆ.

ತಿನ ೨೭೮ ರಲ್ಲಿ ಸಂಧಿವಿಗ್ರಹಿ ಹರಿಹರ ಸೋವಣ್ಣದಂಡನಾಯಕನು ಕುಮಾರಸನಾಡಾದ ತೊಜಿನಾಡನ್ನು ಕ್ರಿ.ಶ. ೧೨೪೯ರಲ್ಲಿ ಆಳುತ್ತಿದ್ದ ಬೊಮ್ಮಣದಣ್ಣಾಯಕ ಮತ್ತು ರೇಚಿಯದಣ್ಣಾಯಕರ ಅಣ್ಣನೆಂದು ಹೇಳಿದೆ. ಅದೇ ಸ್ಥಳದ ಅದೇ ಕಾಲದ ತಿನ ೨೬೭ನೆಯ ಶಾಸನ ತ್ರುಟಿತವಾಗಿದ್ದು ಅದರಲ್ಲಿ ಹರಿಹರ ಸೋವದಂಡನಾಯಕನ ಇಬ್ಬರು ಸೋದರರ ಹೆಸರುಗಳಿವೆ. ಶಾಸನಪಾಠವನ್ನು ಮೂಲದೊಡನೆ ತಾಳೆನೋಡಲಾಗಲಿಲ್ಲ. ಬಹುಶಃ ಅದೇ ಬೊಮ್ಮಣ್ಣ ರೇಚಿಯರೇ ಇಲ್ಲಿಯೂ ಉಕ್ತವಾಗಿರಬಹುದು.

ಈ ಸಂಪುಟದ ಕೆಲವು ಶಾಸನಗಳಲ್ಲಿ ಪೆರುಮಾಳುದಂಡನಾಯಕನ ಹೆಸರಿದೆ. ಈ ದಂಡನಾಯಕನು ದೇವನಹಳ್ಳಿಯನ್ನು ಮುತ್ತಿದಾಗ ಯುದ್ಧದಲ್ಲಿ ವೀರನೊಬ್ಬನು ಮಡಿದುದನ್ನು ದೇವಗಳ್ಳಿಯ ವೈ ೨೦೪ನೆಯ ಶಾಸನದಲ್ಲಿ ನಮೂದಿಸಲಾಗಿದೆ. ಶಾಸನ ತ್ರುಟಿತವಾಗಿದ್ದು ವಿವರಗಳು ಹೋಗಿವೆ. ಮಡಿದ ವೀರನು ಬಹುಶಃ ಈ ಹೊಯ್ಸಳ ದಂಡನಾಯಕನ ಪರವಾಗಿ ಹೋರಾಡಿರಬೇಕು. ಈ ಯುದ್ಧಕ್ಕೆ ಕಾರಣಗಳೇನು, ಅದರ ವಿವರಗಳೇನು ಎಂಬ ಪ್ರಶ್ನೆಗಳಿಗೆ ಸ್ಪಷ್ಟ ಉತ್ತರ ದೊರಕದು.

ತಿ. ನರಸೀಪುರದ ತಿನ ೭ ರಿಂದ ಈ ದಂಡನಾಯಕನು ಆಲುಗೋಡು ಅಥವ ಸರ್ವಜ್ಞ ಪ್ರಸನ್ನ ಚನ್ನಕೇಶವಪುರದ ಕೇಶವದೇವ ಮತ್ತು ರಂಗನಾಥದೇವರ ರಂಗಮಂಟಪಗಳನ್ನು ಕಟ್ಟಿಸಿದಂತೆ ತಿಳಿದುಬರುತ್ತದೆ. ದಾನಿಯನ್ನು ವರ್ಣಿಸುವ ಆರಂಭ ಭಾಗ ಹೋಗಿದೆ. ಆದರೆ ತಿನ ೨೫೮ ರಿಂದ ಅವನು ವಿಷ್ಣುದೇವ ಮತ್ತು ಮಂಚಾಂಬಿಕೆಯರ ಮಗನೆಂಬುದು ತಿಳಿದುಬರುತ್ತದೆ. ಈ ಶಾಸನವು ಖಂಡಿಕ ಬಾಲಶಿಕ್ಷೆಯನ್ನು ನಡೆಸುವುದಕ್ಕೆ ಬಾಲಕರಿಗೆ ನಾಗರ, ಕನ್ನಡ, ತಿಗುಳ (ತಮಿಳು) ಆರ್ಯ (ಮರಾಠಿ) ಭಾಷೆಗಳನ್ನು ಕಲಿಸುವ ಉಪಾಧ್ಯಾಯರಿಗೂ ಋಗ್ವೇದವನ್ನು ಓದಿಸುವ ಉಪಾಧ್ಯಾಯರಿಗೂ ಜೀವಿತಕ್ಕೆ ಭೂಮಿಯನ್ನು ಮಹಾಜನಗಳಿಂದಲೂ ಇನ್ನೊಬ್ಬನಿಂದಲೂ ಕೊಂಡು ದತ್ತಿಬಿಟ್ಟಿದೆ. ಇದರೊಂದಿಗೆ ಎರಡು ಮನೆಗಳನ್ನೂ ಬಿಟ್ಟಿದೆ. ಈ ಮನೆಗಳು ಶಾಲೆ ನಡೆಸುವುದಕ್ಕೋ ಉಪಾಧ್ಯರ ವಾಸಕ್ಕೋ ತಿಳಿಯದು. ಉಪಾಧ್ಯರ ಜೀವಿತಕ್ಕೆ ವರ್ಷಕ್ಕೆ ೬ ಗದ್ಯಾಣವಂತೆ ಕೊಟ್ಟಿದೆ. ಇಲ್ಲಿ ಇಬ್ಬರೇ ಉಪಾಧ್ಯರಿದ್ದರೇ ಅಥವಾ ಹೆಚ್ಚು ಜನ ಇದ್ದರೇ ಎಂಬುದೂ ಸ್ಪಷ್ಟವಿಲ್ಲ. ಆದರೂ ಅಲ್ಲಿ ಇಬ್ಬರೇ ಉಪಾಧ್ಯರಿದ್ದು ಆ ಎರಡು ಮನೆಗಳಲ್ಲಿ ವಾಸಮಾಡಿಕೊಂಡು ಅಲ್ಲಿಯೇ ಪಾಠ ನಡೆಸುತ್ತಿದ್ದ ಸಂಭವ ಹೆಚ್ಚು. ಭೂಮಿಯನ್ನು ಸಾಗುವಳಿ ಮಾಡಲು ಇಬ್ಬರಿಗೆ ೨ ಮಗದ ಗದ್ಯಾಣವನ್ನು ದಂಡನಾಯಕನು ಕೊಟ್ಟಿದ್ದಾನೆ. ಇದನ್ನು ಕಟ್ಟುಗುತ್ತಗೆಯಾಗಿ ಪಡೆದಿದ್ದ ಅವರು ೧೦೦೦ ಕಂಬಕ್ಕೆ ೩ ಹೊನ್ನಿನಂತೆ ೪೦೦೦ ಕಂಬಕ್ಕೆ ವರ್ಷಕ್ಕೆ ೧೨ ಗದ್ಯಾಣಗಳನ್ನು ತೆರಬೇಕಾಗಿತ್ತು. ಈ ಮೊಬಲಗನ್ನು ಖಂಡಿಕೆಯನ್ನು ನಡೆಸಲು

[1] ಇ. ಇ., XXX ಪು. ೮೦

ತಿನ ೧೬೨ ತಮಿಳು ಗ್ರಂಥಾಕ್ಷರಗಳಲ್ಲಿರುವ ಸುಂದರವಾದ ಸಂಸ್ಕೃತ ಶಾಸನ. ಇದರಲ್ಲಿ ಸರಸ್ವತೀಕಂಠಾಭರಣ ದೇವನು ರಚಿಸಿದ ಇಮ್ಮಡಿ ಬಲ್ಲಾಳ ಮತ್ತು ಅವನ ಮಗ ಇಮ್ಮಡಿ ನರಸಿಂಹರನ್ನು ಸ್ತುತಿಸಿರುವ ಎರಡು ಪದ್ಯಗಳಿವೆ. ನರಸಿಂಹನನ್ನು ಕುರಿತು ಹಿಂದೆ ಅಚೇತನ ಸ್ತಂಭದಿಂದ ಉದ್ಭವಿಸಿದ ಲಜ್ಜೆಯನ್ನು ಹೋಗಲಾಡಿಸಲು ಈಗ ಬಲ್ಲಾಳನೆಂಬ ಚೇತನಸ್ತಂಭದಿಂದ ನರಸಿಂಹನು ಉದಿಸಿದನು ಎಂದು ಹೊಗಳಿರುವಲ್ಲಿ ಅರಸನನ್ನು ದೇವರಾದ ನರಸಿಂಹನೊಡನೆ ಹೋಲಿಸಿದೆ. ಸರಸ್ವತೀಕಂಠಾಭರಣದೇವ ಎಂಬುದು ಕವಿಯ ಹೆಸರಲ್ಲದೆ ಬಿರುದಾಗಿರಬೇಕು. ಹಾಗಿದ್ದಲ್ಲಿ ಕವಿ ಅಜ್ಞಾತನಾಗಿ ಉಳಿಯುತ್ತಾನೆ.

ಜೋಡಿಬಸವನಪುರದ ಸೋಮೇಶ್ವರನ ಶಾಸನ (ತಿನ ೩೬)ದ ಕಾಲ ಕ್ರಿ. ಶ. ೧೨೩೯–೪೦. ತಮಿಳು ಗ್ರಂಥಲಿಪಿ ಮತ್ತು ತಮಿಳು ಭಾಷೆಯಲ್ಲಿರುವ ಈ ಶಾಸನದ ಕೊನೆಯಲ್ಲಿ ಒಂದು ಸಂಸ್ಕೃತ ಪದ್ಯವೂ ಇದೆ. ಮೂಲದಲ್ಲಿ ಇಟ್ಟಿಗೆಯ ಕಟ್ಟಡವಾಗಿದ್ದ ಹರಿಹರ ದೇವಾಲಯವನ್ನು ಕಲ್ಲಿನಿಂದ ಪುನರ್ನಿರ್ಮಾಣ ಮಾಡಿದುದನ್ನು ತಿಳಿಸುವ ಈ ಶಾಸನ ಕುತೂಹಲ ಕರವಾದುದು. ವಾಸುದೇವನು ಕಟ್ಟಿಸಿದ್ದ ಇಟ್ಟಿಗೆಯ ದೇವಾಲಯವು ಜೀರ್ಣವಾಗಿರಲು ಅವನ ಮರಿಮಗ ಕೇಶವದೇವನು ಜೀರ್ಣೋದ್ಧಾರ ಮಾಡಿಸಿದನು; ಜೊತೆಗೆ ಗೋಪುರ, ದುರ್ಗೀಶ್ವರಮುಡೈಯಾರಿಗೆ ಮಕರತೋರಣ, ವೃಷಭದೇವರು ಮತ್ತು ಪಾಕಶಾಲೆಗಳನ್ನು ಸೇರಿಸಿದನು.

ಸೋಮನಾಥಪುರದ ತಿನ ೮೮ ಮುಮ್ಮಡಿ ನರಸಿಂಹನ ಶಾಸನ. ಅವನ ಪ್ರಿಯಪುತ್ರನೆನಿಸಿಕೊಂಡಿದ್ದ ಮಂತ್ರಿಯೂ ದಂಡನಾಯಕನೂ ಆದ ಸೋಮೆಯನು ವಿದ್ಯಾನಿಧಿಪ್ರಸನ್ನ ಸೋಮನಾಥಪುರವೆಂದು ತನ್ನ ಹೆಸರಿನಿಂದ ಅಗ್ರಹಾರ ವೊಂದನ್ನು ಸ್ಥಾಪಿಸಿ ಅಲ್ಲಿನ ದೇವಾಲಯದಲ್ಲಿ ಕೇಶವದೇವರು ಮುಖ್ಯವಾದ ದೇವರುಗಳನ್ನು ಪ್ರತಿಷ್ಠೆ ಮಾಡಿಸಿದನು. ಪೂಜೆ ಮತ್ತು ಹಲವು ಕೈಂಕರ್ಯಗಳಿಗಾಗಿ ದೊರೆಯು ೩೦೦೦ (ಗದ್ಯಾಣದ ?) ಕರವನ್ನು ದತ್ತಿಬಿಟ್ಟಿದ್ದಾನೆ. ಈ ದತ್ತಿಯನ್ನು ಸೋಮೆಯದಂಡನಾಯಕನ ಅಳಿಯಂದಿರಾದ ಮಲ್ಲಿದೇವ ಚಿಕ್ಕಕೇತಯರಿಬ್ಬರೂ ವಿಭಾಗಿಸಿ ಅಮೃತಪಡಿ, ಉಪಬ್ರಯಕ್ಕೂ ನಿಯೋಗಿಗಳ ಜೀವಿತವರ್ಗಕ್ಕೂ ಹಂಚಿದುದನ್ನು ವಿವರವಾಗಿ ಕೊಟ್ಟಿದೆ. ಕರದಿಂದ ಒಟ್ಟು ಆದಾಯ ಬರುವುದು ೩೩೮೭ ಗದ್ಯಾಣ, ೩ ಹಣ ; ೭೦ ದೇವತೆಗಳ ದೇವದಾನದಿಂದ ಬರುವ ಸಿದ್ಧಾಯ ೨೧೧ ಗದ್ಯಾಣ. ೭೦ ದೇವತೆಗಳ ವಿವರ ಹೀಗಿದೆ: ವಿದ್ಯಾನಿಧಿಪ್ರಸನ್ನ ಸೋಮನಾಥಪುರದ ಗ್ರಾಮಮಧ್ಯದ ದೇವಾಲಯದಲ್ಲಿ ಪ್ರಸನ್ನ ಕೇಶವ, ಗಂಡಭೇರುಂಡ ಗೋಪಾಲ ಮತ್ತು ವರದಜನಾರ್ದನ; ಅದೇ ದೇವಾಲಯದ ಪ್ರಾಕಾರದಲ್ಲಿರುವ ಬ್ರಹ್ಮಾದಿದೇವರು ೬, ಕೇಶವಾದಿದೇವರು ೧೨, ಹಂಸನಾರಾಯಣಾದಿದೇವರು ೧೨, ಮತ್ಸ್ಯಾದಿದೇವರು ೧೦, ಸಂಕರ್ಷಣಾದಿದೇವರು ೧೨, ಕೃಷ್ಣಾವತಾರದದೇವರು ೧೨, ಕಾವೇರಿತೀರದಲ್ಲಿರುವ ಲಕ್ಷ್ಮೀನರಸಿಂಹ ಮತ್ತು ಯೋಗನಾರಾಯಣ ಮತ್ತು ಮಳವಳ್ಳಿಯ ಸಾರಂಗಪಾಣಿದೇವರು. ವೃತ್ತಿಗೆ ೪೫ ಗದ್ಯಾಣಗಳಂತೆ ೧೪ ವೃತ್ತಿಗಳಿಂದ ಬರುವ ಆದಾಯ ೬೩೦ ಗದ್ಯಾಣ ; ೪ ತೋಟಗಳು ೪ ಗ್ರಾಮಗಳಿಂದ ೮೦ ಗದ್ಯಾಣ; ಸಲಗೆಗೆ ಒಂದು ಗದ್ಯಾಣದಂತೆ ೨೦೦ ಸಲಗೆ ಗದ್ದೆಗೆ ೨೦೦ ಗದ್ಯಾಣ ; ಯೆಡದೊರೆನಾಡಿನ ಹಾದರಿವಾಗಿಲಿಂದ ೧೫೦ ಗದ್ಯಾಣ; ಬಡಗರೆನಾಡಿನ ಮೂಡೆಯಹಳ್ಳಿಯಿಂದ ೧೯೯೭ ಗದ್ಯಾಣ ೩ ಹಣ ; ಸೀಗಲನಾಡ ಮಾರದೇವನು ಕೊಟ್ಟ ಹೊಂಗೆಯಹಳ್ಳಿ ಮಾರೆಯಹಳ್ಳಿಗಳಿಂದ ೧೨೦ ಗದ್ಯಾಣ—ಒಟ್ಟು ೩೩೮೭ ಗದ್ಯಾಣ ೩ ಹಣ.

ಹಲವು ಬಗೆಯ ಕೈಂಕರ್ಯಗಳಿಗಾಗಿ ನಡೆಸಬೇಕಾಗಿದ್ದ ವೆಚ್ಚದ ವಿವರವನ್ನು ಶಾಸನ ಕೊಡುತ್ತದೆ. ಅಮೃತಪಡಿಗೆ ನಿತ್ಯಪಡಿ ಅಕ್ಕಿ ೫ ಸಲಗೆ ೧೬ ಕೊಳಗ ೧ ಬಳ್ಳ ಮತ್ತು ೩ ಮಾನದಂತೆ, ಜೊತೆಗೆ ಹಬ್ಬ ಹೆಚ್ಚುಕಟ್ಟಳೆಗಳಿಗೆ ಅಧಿಕಪಡಿಯೂ ಸೇರಿ, ವರ್ಷವೊಂದಕ್ಕೆ ಒಟ್ಟು ೫೫೫೫ ಸಲಗೆ ೧೪ ಕೊಳಗ ೧ ಬಳ್ಳ ನೆಲ್ಲು ಬೇಕಾಗುತ್ತಿತ್ತು. ಇದರ ಬೆಲೆ ೫ ಸಲಗೆಗೆ ೧ ಗದ್ಯಾಣದಂತೆ ೧೧೧೧ ಗದ್ಯಾಣ ಅಡ್ಡ–ಬೇಳೆ ಹಣ. ಇದೇ ರೀತಿ ಎಣ್ಣೆ, ಎಳ್ಳು, ತುಪ್ಪ, ಮೊಸರು, ಹೆಸರು, ಉಪ್ಪು, ಬೇಳೆ, ಮೆಣಸು, ಗೋಧಿ ಮುಂತಾದುವಕ್ಕೂ ಬೆಲೆಯನ್ನು ಲೆಕ್ಕಹಾಕಿರುವುದಲ್ಲದೆ ವೈಷ್ಣವರು, ಆಚಾರ್ಯರು, ನಂಬಿಗಳು, ಪರಿಚಾರಕರು, ಬಾಣಸಿಗರು ಮುಂತಾದ ಜೀವಿತವರ್ಗಕ್ಕೆ ಆಗುವ ವೆಚ್ಚದ ವಿವರಗಳೂ ಇವೆ. ಈ ಎಲ್ಲ ವಿವರಗಳನ್ನೂ ತಿಳಿಸಿರುವ ಶಾಸನದ ಕಡೆಯಲ್ಲಿ ಒಟ್ಟು ವೆಚ್ಚ ೩೪೦೨ ಗದ್ಯಾಣ ೩ ಹಣ ಎಂದಿದೆ. ಕೊಟ್ಟಿರುವ ವೆಚ್ಚಗಳ ವಿವರ ಈ ಮೊತ್ತಕ್ಕೆ ಸರಿಹೊಂದುತ್ತದೆ. ಆದರೆ ಈ ಮೊತ್ತ ಆಯದ ಮೊತ್ತವಾದ ೩೩೮೭ ಗದ್ಯಾಣ, ೩ ಹಣಕ್ಕಿಂತ ೧೫ ಗದ್ಯಾಣ ಹೆಚ್ಚು.

ಶಾಸನದಲ್ಲಿ ಎರಡು ತೇದಿಗಳಿವೆ. ೧) ಕ್ರಿ.ಶ. ೧೨೬೯ ಜೂನ್ ೧೨ ಮತ್ತು ೨) ಕ್ರಿ.ಶ. ೧೨೭೬ ಸೆಪ್ಟೆಂಬರ್ ೧೨. ಮೊದಲನೆಯದು ರಾಜನು ದತ್ತಿ ಬಿಟ್ಟ ಕಾಲ. ಸೋಮೆಯದಂಡನಾಯಕನ ಅಳಿಯಂದಿರು ಇದರ ಉತ್ಪತ್ತಿಯನ್ನು ಬೇರೆಬೇರೆ ವೆಚ್ಚಗಳಿಗಾಗಿ ಹಂಚಿದುದು ಮೇಲ್ಕಂಡಂತೆ ಇದಾದ ಏಳು ವರ್ಷಗಳ ನಂತರವೇ.

ಅದೇ ಸ್ಥಳದ ಅದೇ ಕಾಲದ ತಿನ ೯೬ ಶೈವದೇವಾಲಯಗಳಿಗೆ ಬಿಟ್ಟ ಇಂಥದೇ ದತ್ತಿಯನ್ನು ತಿಳಿಸುತ್ತದೆ.

ಇದಕ್ಕಾಗಿ ಬಿಟ್ಟ ದತ್ತಿಯು ಒಟ್ಟು ವರಮಾನ ೨೫೫೪½ ಗದ್ಯಾಣವನ್ನು ಇದು ಬೇರೆ ಹಲವು ದೇವಸ್ಥಾನಗಳಿಗಾಗಿ ಹಂಚಿಕೊಟ್ಟಿದೆ. ಆದರೆ ಶಾಸನದ ಕಡೆಯಭಾಗ ಒಡೆದುಹೋಗಿದ್ದು ಕೆಲವು ವಿವರಗಳು ದೊರೆಯದಂತಾಗಿವೆ. ದಂಡನಾಯಕನು ಬಿಟ್ಟ ಒಟ್ಟು ೨೧ ವೃತ್ತಿಗಳಲ್ಲಿ ೧೪ ವೃತ್ತಿಗಳು ವೈಷ್ಣವಸ್ಥಾನಕ್ಕೂ ಉಳಿದ ೭ ವೃತ್ತಿಗಳು ಶೈವಸ್ಥಾನಕ್ಕೂ ಸಲ್ಲುತ್ತವೆ.

ಅದೇ ಸ್ಥಳದಲ್ಲಿರುವ ಕ್ರಿ.ಶ. ೧೨೭೧ರ ತಿನ ೧೧ನೆಯ ಶಾಸನವನ್ನು ಪತ್ರಶಾಸನವೆಂದು ಕರೆದಿದೆ. ಭಾಷೆಯಲ್ಲಿ ಅಲ್ಲಲ್ಲಿ ಅಸ್ಪಷ್ಟತೆಗಳಿರುವುದರಿಂದ ಅದನ್ನು ಸರಿಯಾಗಿ ಅರ್ಥೈಸುವುದು ಕಷ್ಟ. ದೇವಾಲಯಗಳಿಗೆ ಸೇರಿದ್ದ ದೇವದಾನ ಭೂಮಿಗಳನ್ನೊಳಗೊಂಡಂತೆ ಸೋಮನಾಥಪುರದ ೬ ತತ್ತುಗಳಿದ್ದು ಅವುಗಳಲ್ಲಿ ಬಂದೂರ ತತ್ತು ಒಂದು. ಇವರಲ್ಲಿ ವೈಷ್ಣವ ದೇವಾಲಯಗಳಿಗೆ ೧೪ ವೃತ್ತಿಗಳು ಸೇರಿದ್ದುವು. ಇವುಗಳ ಭೂಮಿಯನ್ನೂ ಹಳ್ಳಿಗಳಲ್ಲಿ ದತ್ತಿಬಿಟ್ಟಿರುವ ತೋಟಗಳನ್ನೂ ಹಾದರವಾಗಿಲಗ್ರಾಮವನ್ನೂ ೨೦೦ ಸಲಗೆ ದೇವರಕೊಡಗೆಯ ಗದ್ದೆಯನ್ನೂ ಆಚಾರ್ಯರು, ವೈಷ್ಣವರು, ನಂಬಿಯರು ಅನುಭವಿಸಿಕೊಂಡು ಅದಕ್ಕೆ ತೆರಬೇಕಾದ ಸಿದ್ಧಾಯ ೧೦೬೦ ಗದ್ಯಾಣಗಳಿಗೆ ಬದಲಾಗಿ ದೇವಾಲಯದ ಭಂಡಾರಕ್ಕೆ ೫೬೦೦ ಸಲಗೆ ಭತ್ತವನ್ನು ಅಳೆಯಬೇಕೆಂದು ನಿಗದಿಯಾಗಿತ್ತು ಮತ್ತು ಆ ಸ್ಥಳಗಳಿಗೆ ಅದ್ದಿಕ, ಕೋಲುಕಾರ ಮೊದಲಾದ ಅಧಿಕಾರಿಗಳು ಹೊಗಸಲ್ಲ ಎಂದೂ ಕಟ್ಟಳೆಯಾಗಿತ್ತು. ಕೆಲವು ಸಂಸ್ಕೃತ ಶಾಸನಗಳಲ್ಲಿ ರಾಜರು ದಾನಿಗಳಿಗೆ ಕೊಟ್ಟ ವಿಶೇಷ ರಕ್ಷಣೆ 'ಅಚಟಭಟಪ್ರವೇಶ' ದಂತೆಯೇ ಇದು. ಅದ್ದಿಕ ಎಂಬುದು ಅಧ್ಯಕ್ಷ ಎಂಬುದರ ರೂಪಾಂತರವಾಗಿದ್ದು ಅವನು ಒಂದು ಇಲಾಖೆಯ ಅಧಿಕಾರಿಯಾಗಿದ್ದನು. ಅಧಿಕಾರಿಗಳ ಪಟ್ಟಿಯಲ್ಲಿ ಅವನೂ ಸೇರಿದ್ದಾನೆ.[1] ಕೋಲುಕಾರನು ಕೈಯಲ್ಲಿ ಕೋಲು ಹಿಡಿದಿರುತ್ತಿದ್ದ ಸೇವಕ. ಭೂಮಿಯ ತೆರಿಗೆಯನ್ನು ಗೊತ್ತುಪಡಿಸಿ ವಸೂಲುಮಾಡಲು ಊರೂರು ತಿರುಗುವ ಕಂದಾಯದ ಇಲಾಖೆಯ ಅಧಿಕಾರಿಗಳಿವರೆಂದು ತೋರುತ್ತದೆ.

ತಿನ ೨೭೪ ರಲ್ಲಿ ಸಂಧಿವಿಗ್ರಹಿ ಹರಿಹರ ಸೋಮಣ್ಣದಂಡನಾಯಕನು ಕುಮಾರಸನಾದಾದ ತೊಜಿನಾಡನ್ನು ಕ್ರಿ.ಶ. ೧೨೭೪ರಲ್ಲಿ ಆಳುತ್ತಿದ್ದ ಬೊಮ್ಮಣದಣ್ಣಾಯಕ ಮತ್ತು ರೇಚೆಯದಣ್ಣಾಯಕರ ಅಣ್ಣನೆಂದು ಹೇಳಿದೆ. ಅದೇ ಸ್ಥಳದ ಅದೇ ಕಾಲದ ತಿನ ೨೭೭ನೆಯ ಶಾಸನ ತ್ರುಟಿತವಾಗಿದ್ದು ಅದರಲ್ಲಿ ಹರಿಹರ ಸೋಮದಂಡನಾಯಕನ ಇಬ್ಬರು ಸೋದರರ ಹೆಸರುಗಳಿವೆ. ಶಾಸನಪಾಠವನ್ನು ಮೂಲದೊಡನೆ ತಾಳೆನೋಡಲಾಗಲಿಲ್ಲ. ಬಹುಶಃ ಅದೇ ಬೊಮ್ಮಣ್ಣ ರೇಚೆಯರೇ ಇಲ್ಲಿಯೂ ಉಕ್ತವಾಗಿರಬಹುದು.

ಈ ಸಂಪುಟದ ಕೆಲವು ಶಾಸನಗಳಲ್ಲಿ ಪೆರುಮಾಳುದಂಡನಾಯಕನ ಹೆಸರಿದೆ. ಈ ದಂಡನಾಯಕನು ದೇವನಹಳ್ಳಿಯನ್ನು ಮುತ್ತಿದಾಗ ಯುದ್ಧದಲ್ಲಿ ವೀರನೊಬ್ಬನು ಮಡಿದುದನ್ನು ದೇವಗಳ್ಳಿಯ ವೈ ೨೦೪ನೆಯ ಶಾಸನದಲ್ಲಿ ನಮೂದಿಸಲಾಗಿದೆ. ಶಾಸನ ತ್ರುಟಿತವಾಗಿದ್ದು ವಿವರಗಳು ಹೋಗಿವೆ. ಮಡಿದ ವೀರನು ಬಹುಶಃ ಈ ಹೊಯ್ಸಳ ದಂಡನಾಯಕನ ಪರವಾಗಿ ಹೋರಾಡಿರಬೇಕು. ಈ ಯುದ್ಧಕ್ಕೆ ಕಾರಣಗಳೇನು, ಅದರ ವಿವರಗಳೇನು ಎಂಬ ಪ್ರಶ್ನೆಗಳಿಗೆ ಸ್ಪಷ್ಟ ಉತ್ತರ ದೊರಕದು.

ತಿ. ನರಸೀಪುರದ ತಿನ ೭ ರಿಂದ ಈ ದಂಡನಾಯಕನು ಅಲುಗೋಡು ಅಥವ ಸರ್ವಜ್ಞ ಪ್ರಸನ್ನ ಚನ್ನಕೇಶವಪುರದ ಕೇಶವದೇವ ಮತ್ತು ರಂಗನಾಥದೇವರ ರಂಗಮಂಟಪಗಳನ್ನು ಕಟ್ಟಿಸಿದಂತೆ ತಿಳಿದುಬರುತ್ತದೆ. ದಾನಿಯನ್ನು ವರ್ಣಿಸುವ ಆರಂಭ ಭಾಗ ಹೋಗಿದೆ. ಆದರೆ ತಿನ ೨೩೮ ರಿಂದ ಅವನು ವಿಷ್ಣುದೇವ ಮತ್ತು ಮಂಚಾಂಬಿಕೆಯರ ಮಗನೆಂಬುದು ತಿಳಿದುಬರುತ್ತದೆ. ಈ ಶಾಸನವು ಖಂಡಿಕ ಬಾಲಶಿಕ್ಷೆಯನ್ನು ನಡೆಸುವುದಕ್ಕೆ ಬಾಲಕರಿಗೆ ನಾಗರ, ಕನ್ನಡ, ತಿಗುಳ (ತಮಿಳು) ಆರ್ಯ (ಮರಾಠಿ) ಭಾಷೆಗಳನ್ನು ಕಲಿಸುವ ಉಪಾಧ್ಯಾಯರಿಗೂ ಋಗ್ವೇದವನ್ನು ಓದಿಸುವ ಉಪಾಧ್ಯಾಯರಿಗೂ ಜೀವಿತಕ್ಕೆ ಭೂಮಿಯನ್ನು ಮಹಾಜನಗಳಿಂದಲೂ ಇನ್ನೊಬ್ಬನಿಂದಲೂ ಕೊಂಡು ದತ್ತಿಬಿಟ್ಟಿದೆ. ಇದರೊಂದಿಗೆ ಎರಡು ಮನೆಗಳನ್ನೂ ಬಿಟ್ಟಿದೆ. ಈ ಮನೆಗಳು ಶಾಲೆ ನಡೆಸುವುದಕ್ಕೋ ಉಪಾಧ್ಯರ ವಾಸಕ್ಕೋ ತಿಳಿಯದು. ಉಪಾಧ್ಯರ ಜೀವಿತಕ್ಕೆ ವರ್ಷಕ್ಕೆ ೬ ಗದ್ಯಾಣದಂತೆ ಕೊಟ್ಟಿದೆ. ಇಲ್ಲಿ ಇಬ್ಬರೇ ಉಪಾಧ್ಯರಿದ್ದರೇ ಅಥವಾ ಹೆಚ್ಚು ಜನ ಇದ್ದರೇ ಎಂಬುದೂ ಸ್ಪಷ್ಟವಿಲ್ಲ. ಆದರೂ ಅಲ್ಲಿ ಇಬ್ಬರೇ ಉಪಾಧ್ಯರಿದ್ದು ಆ ಎರಡು ಮನೆಗಳಲ್ಲಿ ವಾಸಮಾಡಿಕೊಂಡು ಅಲ್ಲಿಯೇ ಪಾಠ ನಡೆಸುತ್ತಿದ್ದ ಸಂಭವ ಹೆಚ್ಚು. ಭೂಮಿಯನ್ನು ಸಾಗುವಳಿ ಮಾಡಲು ಇಬ್ಬರಿಗೆ ೨ ದುಗದ ಗದ್ಯಾಣವನ್ನು ದಂಡನಾಯಕನು ಕೊಟ್ಟಿದ್ದಾನೆ. ಇದನ್ನು ಕಟ್ಟುಗುತ್ತಗೆಯಾಗಿ ಪಡೆದಿದ್ದ ಅವರು ೧೦೦೦ ಕಂಬಕ್ಕೆ ೩ ಹೊನ್ನಿನಂತೆ ೪೦೦೦ ಕಂಬಕ್ಕೆ ವರ್ಷಕ್ಕೆ ೧೨ ಗದ್ಯಾಣಗಳನ್ನು ತೆರಬೇಕಾಗಿತ್ತು. ಈ ಮೊಬಲಗನ್ನು ಖಂಡಿಕೆಯನ್ನು ನಡೆಸಲು

[1] ಇ. ಇ., XXX ಪು. ೮೦

ಬಳಸಲಾಗುತ್ತಿತ್ತು. ಮಹಾಜನಗಳು ಅದಕ್ಕೆ ತೆರಬೇಕಾದ ತೆರಿಗೆಗಳನ್ನು ತೆತ್ತು ಈ ಧರ್ಮವನ್ನು ನಡೆಸುವಂತೆ ಕಟ್ಟಳೆಯಾಗಿತ್ತು.

ಮುಮ್ಮಡಿ ನರಸಿಂಹನ ಮತ್ತೊಬ್ಬ ಅಧಿಕಾರಿ ವೀರಕೇತಯ ದಣ್ಣಾಯಕ. ಈತನನ್ನು ಮಹಾಪ್ರಧಾನನೆಂದು ಸಂಬೋಧಿಸಿದೆ (ತಿನ ೩೧೬).

ಈ ಸಂಪುಟದಲ್ಲಿ ಮುಮ್ಮಡಿ ಬಲ್ಲಾಳನ ೬ ಶಾಸನಗಳಿವೆ. ಇವಲ್ಲದೆ ಇನ್ನು ಕೆಲವು ಶಾಸನಗಳನ್ನೂ ಅವನ ಕಾಲಕ್ಕೆ ಸೇರಿಸಬಹುದು. ಚಿಕ್ಕಹನಸೋಗೆಯ ಕೃನ ೫೮ರಿಂದ ಅಲಾಳನಾಥನು ನಾಗದೇವರಸನ ಮಗ ಚೂಡಪ್ಪ ಮತ್ತು ಹಂಪೆವೊಡೆಯರಿಗೆ ಲೇಸಾಗಲೆಂದು ಕೆರೆಯೊಂದನ್ನು ಅಗೆಸಿದನೆಂದು ತಿಳಿದುಬರುತ್ತದೆ. ಅಲಾಳನಾಥನು ಚೂಡಪ್ಪನವರ ಮನೆಯ ಹನಸೋಗೆಯ ಅಧಿಕಾರಿ. ಈ ಚೂಡಪ್ಪನು ಹಂಪೆವೊಡೆಯನ ಮನೆಯಪ್ರಧಾನ. ಹಂಪೆವೊಡೆಯನನ್ನು ಬಲ್ಲಾಳನ ಕುಮಾರನೆಂದು ವರ್ಣಿಸಿರುವುದನ್ನು ಗಮನಿಸಬೇಕು. ಇದು ಆತ್ಮೀಯತೆಯ ಕುರುಹೆಂಬುದು ಸ್ಪಷ್ಟ. ಮನೆಯಪ್ರಧಾನ ಎಂಬುದನ್ನು ಸಾಮಾನ್ಯವಾಗಿ ಮನೆವಾರ್ತೆಯನ್ನು ನೋಡಿಕೊಳ್ಳುವ ಮಂತ್ರಿ ಎಂದು ಅರ್ಥೈಸಿದೆ. ಆದರೆ ಈ ಶಾಸನದಲ್ಲಿ ಮನೆಯ ಹನಸೋಗೆಯ ಅಧಿಕಾರಿ ಎಂದು ಅಲಾಳನಾಥನನ್ನು ವರ್ಣಿಸಿರುವುದನ್ನು ಹೇಗೆ ಅರ್ಥೈಸಬೇಕು? ಹನಸೋಗೆಯ ಅಲಾಳನಾಥನು ಮನೆಯ ಅಧಿಕಾರಿಯಾಗಿದ್ದ ಎಂದೇ? ಹಾಗಿದ್ದಲ್ಲಿ, ಶಾಸನ ಪಾಠವು ಮನೆಯ ಪ್ರಧಾನ ನಾಗದೇವರಸ ಎಂದಿರುವಂತೆ ಮನೆಯ ಅಧಿಕಾರಿ ಹನಸೋಗೆಯ ಅಲಾಳನಾಥ ಎಂದಿರಬೇಕಿತ್ತು. ಮನ್ನೆಯ ಎಂದರೆ ನಾಯಕ, ದಳಪತಿ ಅಥವಾ ವೀರ ಎಂಬ ಅರ್ಥವಿದೆ. ಮನ್ನೆಯ ಸ್ವಾಮ್ಯ ಎನ್ನುವುದನ್ನು ಮನ್ನೆಯನ ಅಧಿಕಾರಕ್ಕೊಳಪಟ್ಟುದು ಎಂದರೆ ಕೆಲವು ಗ್ರಾಮಗಳ ಒಡೆಯ ಎಂಬ ಅರ್ಥದಲ್ಲಿ ತೆಗೆದುಕೊಳ್ಳಲಾಗಿದೆ.[1] ಆದ್ದರಿಂದ ಮನ್ನೆಯ ಎಂಬುದನ್ನು ಒಬ್ಬ ಅಧಿಕಾರಿಯು ಬಹುಶಃ ಉಂಬಳಿಯಾಗಿ ಆಳುತ್ತಿದ್ದ ಒಂದು ಪ್ರಾಂತ (ಗ್ರಾಮ ಸಮೂಹ) ಎಂದೆಣಿಸಬಹುದೆ? ಹಾಗಿದ್ದಲ್ಲಿ, ಚೂಡಪ್ಪನು ಹಂಪೆವೊಡೆಯನ ಮನ್ನೆಯ(ಮಾನ್ಯ)ಕ್ಕೆ ಪ್ರಧಾನನಾಗಿದ್ದ ಎನ್ನಬಹುದು. ಹಾಗೆಯೇ ಅಲಾಳನಾಥನು ಚೂಡಪ್ಪನ ಸ್ವಂತ ಮನ್ನೆಯಕ್ಕೆ ಸೇರಿದ್ದ ಹನಸೋಗೆಯ ಅಧಿಕಾರಿಯಾಗಿದ್ದನೆಂದು ಅರ್ಥೈಸಬಹುದು.

ಸೋಮನಾಥಪುರದಲ್ಲಿರುವ ತಿನ ೮೯ ವೀರಬಲ್ಲಾಳದೇವರಸನ ಶಾಸನ. ಲಿಪಿಯ ಆಧಾರದಿಂದ ಮಾತ್ರವಲ್ಲದೆ ಸೋಮನಾಥಪುರದ ದೇವಾಲಯವು ಮುಮ್ಮಡಿ ನರಸಿಂಹನ ಆಳಿಕೆಯ ಕಾಲದಲ್ಲಿ ನಿರ್ಮಿತವಾದುದರಿಂದಲೂ ಈ ಶಾಸನವನ್ನು ಮುಮ್ಮಡಿ ಬಲ್ಲಾಳನ ಕಾಲದ್ದೆಂದು ಹೇಳಬಹುದು. ಇದು ರಾಜಾಜ್ಞೆಯನ್ನೊಳಗೊಂಡ ಪತ್ರಶಾಸನ; ದೇವಾಲಯದಲ್ಲಿ ಪೂಜೆ, ಅಮೃತಪಡಿ ಮುಂತಾದುವನ್ನು ಏರ್ಪಡಿಸಿದುದನ್ನು ತಿಳಿಸುತ್ತದೆ. ಆ ಸ್ಥಳದ ಮಹಾಜನಗಳ ಅಧೀನದಲ್ಲಿ ೧೨೬ ವೃತ್ತಿಗಳಿದ್ದುವು. ಅವುಗಳಲ್ಲಿ ೭ ವೃತ್ತಿಗಳು ಶೈವಸ್ಥಾನವಾದ ಪಂಚಲಿಂಗ ಮತ್ತು ನರಸಿಂಹೇಶ್ವರ ದೇವರುಗಳಿಗೂ ೧೪ ವೃತ್ತಿಗಳು ವೈಷ್ಣವ ಸ್ಥಾನವಾದ ಪ್ರಸನ್ನಕೇಶವ, ನದಿಯ ದಡದಲ್ಲಿರುವ ಲಕ್ಷ್ಮೀನರಸಿಂಹ ಮತ್ತು ಮಳವಳ್ಳಿಯ ಶಾರಂಗಪಾಣಿದೇವರಿಗೂ ಸೇರಿದ್ದುವು. ಶೈವಸ್ಥಾನದ ನಿಯತಕರವಾದ ಸಿದ್ಧಾಯವನ್ನು ವೈಷ್ಣವ ಸ್ಥಾನದವರಿಗೆ ಕೊಟ್ಟು ಉಳಿದುದನ್ನು ದೇವರ ಅಮೃತಪಡಿ ಮುಂತಾದುವಕ್ಕೆ ಉಪಯೋಗಿಸಬೇಕಾಗಿತ್ತು. ವೈಷ್ಣವಸ್ಥಾನದ ಮಹಾಜನರು ಎಲ್ಲ ೨೧ ವೃತ್ತಿಯ ಸಿದ್ಧಾಯವನ್ನೂ ಸೋಮನಾಥಪುರದ ಮಹಾಜನಗಳಿಗೆ ಕೊಟ್ಟು ಉಳಿದುದನ್ನು ದೇವರುಗಳ ಅಮೃತಪಡಿ ಮುಂತಾದುವಕ್ಕೆ ಉಪಯೋಗಿಸಬೇಕಾಗಿತ್ತು. ಇದರಿಂದ ೨೧ ವೃತ್ತಿಗಳನ್ನು ವೈಷ್ಣವಸ್ಥಾನಕ್ಕೆ ಕೊಟ್ಟದ್ದು ಅವರ ಮೂಲಕ ಶೈವಸ್ಥಾನದ ವೃತ್ತಿಗಳನ್ನು ಪಡೆದು ಅವುಗಳ ಸಿದ್ಧಾಯವನ್ನು ವೈಷ್ಣವಸ್ಥಾನಕ್ಕೆ ಕೊಟ್ಟದ್ದಿರಬಹುದೆಂದು ತೋರುತ್ತದೆ. ಈ ವೈಷ್ಣವಸ್ಥಾನವು ಎಲ್ಲ ವೃತ್ತಿಗಳ ಸಿದ್ಧಾಯವನ್ನೂ ಕೊಡಲು ಬದ್ಧವಾಗಿತ್ತು. ಸೋಮನಾಥಪುರದ ಮಹಾಜನರು ಸೋಮನಾಥಪುರದ ಕಟ್ಟೆ, ಕಾಲುವೆ, ಕೆರೆಗಳನ್ನು ನೋಡಿಕೊಳ್ಳುವುದರ ಜೊತೆಗೆ ತಲಕಾಡಿನ ಕೀರ್ತಿನಾರಾಯಣದೇವರಿಗೆ ಕೊಡಬೇಕಾದ ಸಿಬ್ಬಂದಿಯ ಹೊನ್ನನ್ನೂ ತೆರಬೇಕಾಗಿತ್ತು; ದೇವಾಲಯಗಳ ಉತ್ಪತ್ತಿಗೆ ಭಂಗಬರದಂತೆ ಉಳಿದ ವೆಚ್ಚಗಳನ್ನು ಭರಿಸಲು ಹದಿಕೆ, ಹೊರಣೆ, ಹೊದಿಕೆ ಮೊದಲಾದ ತೆರಿಗೆಗಳನ್ನು ಎತ್ತಬಹುದಾಗಿತ್ತು.

೨೬ ವರ್ಷಗಳ ನಂತರ ಈ ಒಪ್ಪಂದಕ್ಕೆ ಒಂದು ತಿದ್ದುಪಡಿ ತಂದಂತೆ ಕ್ರಿ.ಶ. ೧೩೨೬ರ ತಿನ ೯೦ ರಿಂದ ತಿಳಿಯಬಹುದು. ಆರು ತತ್ತಿನ ಮಹಾಜನರು ಎಂದು ಕರೆಯಲಾದ ಮಹಾಜನರು ವೈಷ್ಣವಮಹಾಜನರಿಗೆ ಹೊದಿಕೆ ಮತ್ತು ಸಿದ್ಧಾಯಗಳಿಂದ ಬರುವ ಆಯದಲ್ಲಿ ೨೧೦ ಗದ್ಯಾಣವನ್ನು ಕೊಡುತ್ತಿದ್ದಂತೆ ತೋರುತ್ತದೆ. ಈಗ ಇದಕ್ಕೆ ಬದಲು ಬೇರೆ

---

1 D. C. Sircar: *Indian Epigraphical Glossary*, p. 198

ಬೇರೆ ಸ್ಥಳಗಳಲ್ಲಿದ್ದ ೩೦ ಸಲಗೆ ಭೂಮಿಯನ್ನು ವೈಷ್ಣವಮಹಾಜನರು ಪಡೆದರು ಮತ್ತು ಅವರು ಕಾಲುವೆಗಳ ಕೆಲಸಕ್ಕಾಗಿ ವರ್ಷಂಪ್ರತಿ ೬ ಗದ್ಯಾಣವನ್ನು ಕಟ್ಟುಗುತ್ತಗೆಯಾಗಿ ಕೊಡಬೇಕಾಗಿತ್ತು. ೩೦ ಸಲಗೆ ಭೂಮಿಯ ಆದಾಯವನ್ನು ದೇವರ ಅಮೃತಪಡಿಗಲ್ಲದೆ ಮತ್ತಾವರೀತಿಯಲ್ಲಿಯೂ ವೆಚ್ಚಮಾಡಕೂಡದೆಂದೂ ವಿಧಿಸಿದೆ.

## ವಿಜಯನಗರ

ಈ ಸಂಪುಟದಲ್ಲಿ ವಿಜಯನಗರದರಸರ ಕಾಲದ ಸುಮಾರು ೫೦ ಶಾಸನಗಳಿವೆ. ಇವುಗಳಲ್ಲಿ ಅತ್ಯಂತ ಪ್ರಾಚೀನವಾದುದು ವೀರಬುಕ್ಕಣ್ಣೊಡೆಯನ ಆಳಿಕೆಗೆ ಸೇರಿದ ಕ್ರನ ೧೨೭. ಹುಣಸೋಜನ ಮಗ ಮಾದೋಜನು ನಿಲ್ಲಿಸಿದ ಈ ವೀರಗಲ್ಲಿನ ಕೆಲಭಾಗ ನಷ್ಟವಾಗಿದೆ. ಈ ಶಾಸನದ ಕಾಲ ಶಕ ೧೨೦೬ನೆಯ ವಿಜಯಸಂವತ್ಸರದ ಫಾಲ್ಗುಣ ಶುದ್ಧ ೧ ಮಂಗಳವಾರ. ಕೊಟ್ಟಿರುವ ಶಕವರ್ಷ ತಪ್ಪಾಗಿರುವುದು ಸ್ಪಷ್ಟ. ವಿಜಯಸಂವತ್ಸರವು ಶಕ ೧೨೭೫ ಎಂದರೆ ಕ್ರಿ.ಶ. ೧೩೫೩-೫೪ಕ್ಕೆ ಸರಿಹೊಂದುತ್ತದೆ. ಆದರೆ ವಿಜಯನಗರದ ಯಾವ ಅರಸನೂ ಇಷ್ಟು ಮುಂಚಿನ ಕಾಲದಲ್ಲಿರಲಿಲ್ಲ. ಕೊಟ್ಟಿರುವ ಕಾಲದ ವಿವರಗಳು ಕ್ರಿ.ಶ. ೧೩೫೪ ಫೆಬ್ರವರಿ ೨೪ಕ್ಕೆ ಎಲ್ಲ ರೀತಿಯಿಂದಲೂ ಸರಿಹೊಂದುತ್ತವೆ. ಆದ್ದರಿಂದ ಶಕವರ್ಷವು ೧೨೭೫ ಆಗಿರಬೇಕು.

ಈ ರಾಜನ ಮಹಾಪ್ರಧಾನ ಬಸವದಣ್ಣಾಯಕ ಮತ್ತು ಅವನ ಅಧಿಕಾರಿ ರಾಘವದೇವರಸರನ್ನು ಕ್ರನ ೨೬೫ರಲ್ಲಿ ಹೆಸರಿಸಿದೆ. ಕ್ರಿ.ಶ. ೧೩೬೭ರ ಈ ಶಾಸನದ ವಿಷಯ ಏನೆಂಬುದು ಸ್ಪಷ್ಟವಾಗುವುದಿಲ್ಲ. ಮೇಲೂರಿನಲ್ಲಿ ಹೊಸದಾಗಿ ದೊರಕಿದ ಒಂದು ತುಂಡುಶಾಸನ (ಕ್ರನ ೮೪) ವೀರ ಬುಕ್ಕರಾಯನ ಆಳಿಕೆಯನ್ನು ತಿಳಿಸುತ್ತದೆ. ಆದರೆ ಈ ರಾಜನು ಒಂದನೆಯ ಬುಕ್ಕನೇ ಅಥವಾ ಇಮ್ಮಡಿ ಬುಕ್ಕನೇ ಎಂದು ನಿರ್ಧರಿಸುವುದು ಕಷ್ಟ.

ಕ್ರನ ೬೬ ನಾಗರಿ ಲಿಪಿಯಲ್ಲಿರುವ ಸಂಸ್ಕೃತ ಮತ್ತು ಕನ್ನಡ ಭಾಷೆಯ ತಾಮ್ರಶಾಸನ. ಇಮ್ಮಡಿ ಹರಿಹರನು ಹೆಬಸೂರು ಗ್ರಾಮವನ್ನು ತನ್ನ ತಂದೆ ಬುಕ್ಕರಾಯನ ಹೆಸರಿನಿಂದ ಬುಕ್ಕರಾಯಪುರವೆಂಬ ಅಗ್ರಹಾರವನ್ನಾಗಿ ಮಾರ್ಪಡಿಸಿದುದನ್ನು ಇದು ತಿಳಿಸುತ್ತದೆ. ತನ್ನ ತಂದೆ ವೀರಬುಕ್ಕರಾಯನಿಗೆ ಶಿವಸಾಯುಜ್ಯ ಪ್ರಾಪ್ತವಾಗಲಿ ಎಂದು ಶಕವರ್ಷ ೧೨೯೮ನೆಯ ನಳ ಸಂವತ್ಸರದ ಫಾಲ್ಗುಣ ಬ ೧ ಮಂಗಳವಾರ ಉತ್ತರಫಲ್ಗುಣಿ ನಕ್ಷತ್ರ (ಕ್ರಿ. ಶ. ೧೩೭೭ನೆಯ ಫೆಬ್ರವರಿ ೨೪)ವಂದು ದತ್ತಿ ಬಿಡಲಾಯಿತೆಂದು ಶಾಸನ ಹೇಳಿದೆ. ಶಾಸನೋಕ್ತ ದಿನದಂದು ಬುಕ್ಕರಾಯನು ತೀರಿಕೊಂಡನು. ಶಾಸನದಲ್ಲಿ ಇದೇ ತೇದಿಯನ್ನು ಕೊಟ್ಟಿದ್ದರೂ ವಾಸ್ತವವಾಗಿ ದಾನಮಾಡಿದುದು ಅನಂತರದ ಬೇರೊಂದು ದಿನದಲ್ಲಿ ಎಂದು ನಾವು ಪರಿಗಣಿಸಿದ್ದೇವೆ. 'ಶಿವಸಾಯುಜ್ಯ ಪ್ರಾಪ್ತಸ್ಯ . . . . . . . . . . . . . ಪರಮೇಶ್ವರಪ್ರಸಾದಸಿದ್ಧ್ಯರ್ಥಂ' ಎಂಬುದನ್ನು ಒಟ್ಟಿಗೆ ಓದದೆ ಪ್ರತ್ಯೇಕವಾಗಿ ಅರ್ಥೈಸಿ ಈ ಮೊದಲೇ ಶಿವಸಾಯುಜ್ಯವನ್ನು ಪಡೆದ ಬುಕ್ಕರಾಜನಿಗೆ ಪುಣ್ಯವಾಗಲಿ ಯೆಂದು ಶಾಸನೋಕ್ತ ತೇದಿಯಂದು ದಾನಮಾಡಲಾಯಿತೆಂದೂ ಹೇಳಬಹುದು. ಹಾಗಿದ್ದಲ್ಲಿ ಒಂದನೆಯ ಬುಕ್ಕರಾಯನು ಶಾಸನೋಕ್ತ ತೇದಿಗೂ ಮೊದಲೇ ತೀರಿಕೊಂಡಿದ್ದನೆಂದು ಊಹಿಸಬೇಕಾಗುತ್ತದೆ.

ಸಂಸ್ಕೃತ ಹಾಗೂ ಕನ್ನಡ ಭಾಷೆಗಳಲ್ಲಿರುವ ಕ್ರಿ.ಶ. ೧೩೯೭ನೆಯ ವರ್ಷದ ಕ್ರನ ೧೭ ಇಮ್ಮಡಿ ಹರಿಹರನ ಮತ್ತೊಂದು ತಾಮ್ರಶಾಸನ. ಮೊದಲನೆಯ ಹಲಗೆಯ ಮುಂಭಾಗದಲ್ಲಿ ಇದು ಪ್ರತಾಪಹರಿಹರಪುರವಾದ ಕೊಳತೂರ ಶಾಸನ ಎಂದಿದೆ. ಇಂತಹ ಟಿಪ್ಪಣಿ ಶಾಸನಗಳಲ್ಲಿ ಅಪರೂಪ. ನಾಗರಿಲಿಪಿಯಲ್ಲಿರುವ ಈ ಶಾಸನದ ಸಂಸ್ಕೃತ ಭಾಗದಲ್ಲಿ ರಾಜನ ವಂಶಾವಳಿಯನ್ನು ವಿವರಿಸುತ್ತ (ಒಂದನೆಯ) ಬುಕ್ಕರಾಜನಿಗೆ ಹರಿಹರ ಮತ್ತು ಮಲ್ಲಿನಾಥರೆಂಬ ಇಬ್ಬರು ಮಕ್ಕಳಿದ್ದರು ಎಂದಿದೆ. ಕನ್ನಡದಲ್ಲಿರುವ ಮುಂದಿನ ಭಾಗದಲ್ಲಿ ಮಹಾಮಂಡಲೇಶ್ವರ ಮಲ್ಲಪ್ಪೊಡೆಯನೆಂದು ಕರೆಯಲಾಗಿರುವ ಈ ಮಲ್ಲಿನಾಥನಿಗೆ ನಾರಾಯಣದೇವಒಡೆಯನೆಂಬೊಬ್ಬ ಮಗನಿದ್ದು ಅವನು ಚನ್ನಪಟ್ಟಣಬಳಿಲದೊಳಗಣ ಕೊಲತೂರುಗ್ರಾಮವನ್ನು ರಾಜನ ಹೆಸರಿನಲ್ಲಿ ಪ್ರತಾಪಹರಿಹರಪುರವೆಂಬ ಹೆಸರಿನಿಂದ ಅಗ್ರಹಾರವನ್ನಾಗಿ ಪರಿವರ್ತಿಸಿ ಅದನ್ನು ೩೬ ವೃತ್ತಿಗಳನ್ನಾಗಿ ವಿಭಾಗಿಸಿ ೩೨ ಜನಕ್ಕೆ ಒಂದೊಂದು ವೃತ್ತಿಯಂತೆಯೂ ಐವರಿಗೆ ಅರ್ಧಾರ್ಧ ವೃತ್ತಿಯಂತೆಯೂ ಉಳಿದ ೧½ ವೃತ್ತಿಯನ್ನು ಒಬ್ಬೊಬ್ಬರಿಗೆ ¼ ವೃತ್ತಿಯಂತೆಯೂ ಒಟ್ಟು ೩೯ ಜನ ಬ್ರಾಹ್ಮಣರಿಗೆ ದತ್ತಿಕೊಟ್ಟನೆಂದಿದೆ.

ಚಿಕ್ಕಹನಸೋಗೆಯ ತ್ರುಟಿತಶಾಸನ ಕ್ರನ ೪೫೮ ಕಾಲ ನಂದನಸಂವತ್ಸರದ ಫಾಲ್ಗುಣ ಬ ೯ ಗುರುವಾರ. ಇದು ಮಲ್ಲಿಕಾರ್ಜುನನ ಆಳಿಕೆಗೆ ಸೇರಿದುದು. ಕಾಲದ ವಿವರ ಕ್ರಿ.ಶ. ೧೪೭೩ರ ಫೆಬ್ರವರಿ ೨೧ಕ್ಕೆ ಹೊಂದುತ್ತದೆ. ಆದರೆ ಈ ಕಾಲಕ್ಕಾಗಲೇ ಅವನ ಸೋದರಸಂಬಂಧಿಯಾದ ವಿರೂಪಾಕ್ಷನು ಸಿಂಹಾಸನವನ್ನಾಕ್ರಮಿಸಿಕೊಂಡಿದ್ದನು. ರಾಜ್ಯಭ್ರಷ್ಟನಾದ

ಮಲ್ಲಿಕಾರ್ಜುನನು ರಾಜ್ಯದ ದಕ್ಷಿಣಭಾಗದಲ್ಲಿ ನೆಲಸಿದಂತೆ ಇತರ ಕೆಲವು ಶಾಸನಗಳಿಂದ ತೋರುತ್ತದೆ. ಪ್ರಕೃತ ಶಾಸನವು ಹೀಗೆ ಅವನು ಗಡೀಪಾರಾಗಿದ್ದ ಕಾಲಕ್ಕೆ ಸೇರಿದುದೆಂಬುದು ಸ್ಪಷ್ಟ. ಅವನಿಗೆ ಆಶ್ರಯವಿತ್ತ ಭಾಗದ ಜನ ಅವನನ್ನು ರಾಜನೆಂದೇ ಪರಿಗಣಿಸಿರಬೇಕು. ಅದರಿಂದಲೇ ಈ ಶಾಸನ ಹುಟ್ಟಿಕೊಂಡಿತೆನ್ನಬಹುದು.

ಈ ಸಂದರ್ಭದಲ್ಲಿ ಟಿ. ಎ. ಗೋಪೀನಾಥರಾಯರು ಸಂಪಾದಿಸಿದ ಮಲ್ಲಿಕಾರ್ಜುನನ ಶ್ರೀಶೈಲದ ತಾಮ್ರಶಾಸನವನ್ನಾಧರಿಸಿ ಸಿವೆಲ್ ಅವರು ಮಲ್ಲಿಕಾರ್ಜುನನು ಕ್ರಿ.ಶ. ೧೪೬೫ರಲ್ಲಿ ತೀರಿಕೊಂಡನೆಂದಿರುವುದನ್ನು ಗಮನಿಸಬಹುದು.[1] ಆದರೆ ಶ್ರೀಶೈಲದ ಶಾಸನದಲ್ಲಿ ಮಲ್ಲಿಕಾರ್ಜುನನ ಪ್ರಸ್ತಾಪವೇ ಇಲ್ಲ ವಿರೂಪಾಕ್ಷನು ತನ್ನ ಪ್ರತಾಪದಿಂದ ರಾಜ್ಯವನ್ನು ಪಡೆದನೆಂಬ (ನಿಜಪ್ರತಾಪಾದಧಿಗತ್ಯರಾಜ್ಯಂ) ಹೇಳಿಕೆಯನ್ನು ಆಧರಿಸಿ ವಿರೂಪಾಕ್ಷನು ಬಹುಶಃ ಮಲ್ಲಿಕಾರ್ಜುನನ ಮಗುವೂ ಸೇರಿದಂತೆ ಹಲವರನ್ನು ಕೊಂದನು ಎಂಬುದು ಅವರ ಅಭಿಪ್ರಾಯ. ಆದರೆ ಇದಕ್ಕೆ ಯಾವ ಆಧಾರವೂ ಇಲ್ಲ. ಪ್ರಕೃತ ಶಾಸನವೂ ಸೇರಿದಂತೆ ಕ್ರಿ.ಶ. ೧೪೬೫ ರಿಂದೀಚಿನ ಕೆಲವು ಶಾಸನಗಳು ಮಲ್ಲಿಕಾರ್ಜುನನು ಜೀವಂತನಾಗಿದ್ದುದನ್ನು ಖಚಿತಪಡಿಸುತ್ತವೆ. ಆತನು ಬಹುಶಃ ವಿರೂಪಾಕ್ಷನೊಡಗೂಡಿ ಜೊತೆಯಾಗಿ ರಾಜ್ಯಭಾರಮಾಡಿರಬೇಕೆಂಬ ಸೂಚನೆಯೂ ಸಾಧುವಲ್ಲ.

ಮುಮ್ಮಡಿ ವಿರೂಪಾಕ್ಷನ ಆಳಿಕೆಯ ಕಾಲದ ಕ್ರಿ.ಶ. ೧೪೮೩ರ ತಡಿಮಾಲಿಂಗಿಯ ಶಾಸನವು (ತಿನ ೨೩೭) ಕಾವೇರಿಯ ದಕ್ಷಿಣಭಾಗದ ಹದಿನಾಡವೇಂಠೆಯಕ್ಕೆ ಸೇರಿದ ಮಾಲಂಗಿ ಅಥವ ಶ್ರೀರಂಗಪುರದ ಜನಾರ್ದನದೇವರಿಗೆ ಸೇರಿದ ಭೂಮಿಗಳ ಮೇಲೆ ಅರಮನೆಗೆ ತೆರಬೇಕಾದ ೧೫ ಗದ್ಯಾಣಗಳ ತೆರಿಗೆಯನ್ನು ಮಾನ್ಯಮಾಡಿದುದನ್ನು ತಿಳಿಸುತ್ತದೆ. ಈ ಗ್ರಾಮವನ್ನು ಮಹಾಮಂಡಲೇಶ್ವರ ಸೋಮಣ್ಣಾವಡೆಯರ ತಾಯಿ ಸಾಯಮ್ಮನಿಗೆ ವೈಭೋಗಕ್ಕಾಗಿ ಎಂದರೆ ಆಕೆಯ ಸ್ವಂತ ವೆಚ್ಚಕ್ಕಾಗಿ ಬಿಡಲಾಗಿತ್ತು. ವೈಭೋಗ ಎಂಬ ಪದ ಕುತೂಹಲಕರವಾದುದು.

ಸಾಳುವನರಸಿಂಹ (II)ನ ಆಳಿಕೆಯ ಕಾಲದ ಕ್ರಿ.ಶ. ೧೪೯೬ರ ವೈ ೧೧೮ರಲ್ಲಿ ಮಹಾಪ್ರಧಾನ ನರಸಣ್ಣನಾಯಕನು ತಿರುಮಕೂಡಲಿನ ಅಗಸ್ತ್ಯನಾಥದೇವರಿಗೆ ದತ್ತಿ ಬಿಟ್ಟ ವಿಷಯವಿದೆ. ನರಸಣ್ಣನಾಯಕನು ಅದೇ ಹೆಸರಿನ ತುಳುವ ವಂಶದವನೇ.

ತಿನ ೯೫ ಇದಕ್ಕಿಂತ ಒಂದು ವರ್ಷ ಈಚಿನದಾದ (ಕ್ರಿ.ಶ. ೧೪೯೭) ಸವೆದುಹೋಗಿರುವ ಸಂಸ್ಕೃತ ಶಾಸನ. ನಂಜಭೂಪತಿಯು ಸೋಮನಾಥಪುರ ಅಗ್ರಹಾರವನ್ನು ಜೀರ್ಣೋದ್ಧಾರ ಮಾಡಿಸಿದನೆಂಬುದನ್ನು ಇದು ನಿರೂಪಿಸುವಂತೆ ತೋರುತ್ತದೆ. ಇದರಲ್ಲಿ ಈಶ್ವರನ ಮಗ ನರಸಿಂಹನ (ಈಶ್ವರಶ್ರೀನೃಸಿಂಹ) ಹೆಸರಿದೆ. ಇವನು ಇಮ್ಮಡಿ ಸಾಳುವ ನರಸಿಂಹನಾಗಿರಲಾರ. ಈಶ್ವರನ ಮಗ ನರಸನಾಯಕನೆಂದೇ ಪರಿಗಣಿಸಬೇಕು. ಇದೇ ಕಾಲದ ವೈ ೨೫ ರೊಂದಿಗೆ ಇದನ್ನು ಹೋಲಿಸಬಹುದು. ಈ ಶಾಸನವೂ ವ್ಯಕ್ತಿಯೊಬ್ಬನಿಗೆ ದತ್ತಿ ಬಿಟ್ಟುದನ್ನು ತಿಳಿಸುವ ತ್ರುಟಿತವಾದ ಸಂಸ್ಕೃತ ಶಾಸನ. ಇಲ್ಲಿ ರಾಜ ನರಸಿಂಹನನ್ನು ಈಶ್ವರ ಸಂಭವನೆಂದೇ ಸ್ಪಷ್ಟವಾಗಿ ತಿಳಿಸಿದೆ. ಇವನಿಗೆ ಕಠಾರಿ ಸಾಳುವನೆಂಬ ಬಿರುದಿದ್ದಂತೆ ತೋರುತ್ತದೆ. ನರಸನಾಯಕನಿಗೆ ಕಡಹರಿಸಾಳುವ (ಬಹುಶಃ ಕಠಾರಿಸಾಳುವ ಎಂಬುದರ ವಿಕೃತರೂಪ) ಎಂಬ ಬಿರುದಿದ್ದುದು ಹಿಂದೆಯೇ ಬಂದಿದೆ.[2] ಆದ್ದರಿಂದ ಈಶ್ವರನ ಮಗ ನರಸಿಂಹನು ನರಸನಾಯಕನೇ ಆಗಿರುವುದು ಹೆಚ್ಚು ಸಂಭವ. ಹಾಗೆಯೇ ತಿನ ೯೫ರ ನರಸಿಂಹನೂ ಇದೇ ನರಸನಾಯಕನಾಗಿರುವುದು ಸ್ಪಷ್ಟ. ಕ್ರಿ.ಶ. ೧೪೯೯ರ ಕಾಲದ ಮತ್ತೊಂದು ಸಂಸ್ಕೃತ ಶಾಸನ (ವೈ ೨೭)ದಲ್ಲಿಯೂ ಈಶ್ವರನ ಮಗ ನರಸನಾಯಕನನ್ನು ಸ್ಪಷ್ಟವಾಗಿ ರಾಜನೆಂದೇ ಸಂಬೋಧಿಸಿದೆ. ಇಲ್ಲಿ ಸಾಳುವ ನರಸಿಂಹನ ಹೆಸರೇ ಇಲ್ಲ. ಈ ಎಲ್ಲ ಸನ್ನಿವೇಶಗಳೂ ನರಸನಾಯಕನು ವಾಸ್ತವವಾಗಿ ಆಳುತ್ತಿದ್ದುದು ಮಾತ್ರವಲ್ಲದೆ ತನ್ನ ಹೆಸರಿನಲ್ಲಿಯೇ ಶಾಸನಗಳನ್ನು ಹಾಕಿಸಲೂ ಹಿಂಜರಿಯಲಿಲ್ಲವೆಂಬುದನ್ನು ವ್ಯಕ್ತಪಡಿಸುತ್ತವೆ.

ಮಹಾರಾಜಾಧಿರಾಜ, ರಾಜಪರಮೇಶ್ವರ, ಚತುಸ್ಸಮುದ್ರಾಧಿಪತಿ ಎಂದು ವರ್ಣಿತನಾದ ವೀರಮಹಾರಾಯನ ಆಳಿಕೆಯನ್ನು ತಡಿಮಾಲಿಂಗಿಯ ಕ್ರಿ. ಶ. ೧೫೧೪ರ ತಿನ ೨೪೫ ತಿಳಿಸುತ್ತದೆ. ಈತನು ಕೃಷ್ಣದೇವರಾಯನೇ ಆಗಿರಬೇಕು. ಇದನ್ನು ಬರೆಯುವಲ್ಲಿ ಲಿಪಿಕಾರನೋ ಲೇಖಕನೋ 'ವೀರ' ಆದಮೇಲೆ 'ಕೃಷ್ಣದೇವ' ಎಂಬುದನ್ನು ಸೇರಿಸಲು ಮರೆತಿರಬೇಕು.

ಕ್ರಿ. ಶ. ೧೫೧೬ರ ಗುರೂರಿನ ಶಾಸನ (ವೈ ೧೯೪) ಮಹಾಸೇನಾಸಮುದ್ರ, ಸಾಳುವಗಜಸಿಂಹ ಎಂಬ ಬಿರುದುಗಳಿದ್ದ ಶ್ರೀರಂಗಪಟ್ಟಣದ ಚಿಕ್ಕೊಡೆಯನ ಮಗ ವೀರಪ್ಪೊಡೆಯನು ಕೃಷ್ಣದೇವರಾಯನ ಅಪ್ಪಣೆಯಂತೆ ದತ್ತಿಬಿಟ್ಟುದನ್ನು

---

[1] ಇ ಐ., XV, ಪು. 8-25

[2] ಎ ಕ., III (1974), ಪೀಠಿಕೆ ಪು. ೮೭

ತಿಮ್ಮರಾಜನ ಮಗ ರಾಯಸದ ವೆಂಕಟಾದ್ರಿಯು ಶ್ರೀರಂಗಪಟ್ಟಣಕ್ಕೆ ಸೇರಿದ ಬಂದ ಗ್ರಾಮವನ್ನೂ ಅದರ ಉಪಗ್ರಾಮಗಳನ್ನೂ ದತ್ತಿಬಿಟ್ಟುದನ್ನು ತಿಳಿಸುತ್ತದೆ. ಬಂದ ಎಂಬುದು ದತ್ತಿಯ ಗ್ರಾಮದ ಹೆಸರು. ತಿನ ೪೭ರಲ್ಲಿನ ದಾನಿಯೂ ಇವನೇ. ಅವೇ ದೇವರುಗಳಿಗೆ ಅವೇ ಪೂಜೆನೈವೇದ್ಯಗಳಿಗಾಗಿಯೇ ದತ್ತಿಬಿಟ್ಟನೆಂದು ಹೇಳುವ ಈ ಶಾಸನದಲ್ಲಿ ದತ್ತಿಬಿಟ್ಟ ಗ್ರಾಮ ಅದೇ ಶ್ರೀರಂಗಪಟ್ಟಣಕ್ಕೆ ಸೇರಿದ ತುಂಬಲ ಎಂದಿದೆ. ಈ ಎರಡೂ ಶಾಸನಗಳಲ್ಲಿಯೂ ಬಹುಶಃ ಒಂದೇ ದತ್ತಿಗೆ ಸಂಬಂಧಿಸಿದ ಒಕ್ಕಣೆ ಇದೆ ಎಂದೂಹಿಸಬಹುದಾಗಿದೆ. ಒಂದನ್ನು ತಿರುಮುಕೂಡಲಿನಲ್ಲೂ ಇನ್ನೊಂದನ್ನು ದಾನಕೊಟ್ಟ ಗ್ರಾಮದಲ್ಲಿಯೂ ಹಾಕಿಸಲಾಗಿದೆ. ಆದ್ದರಿಂದ ತಿನ ೨೭ರಲ್ಲಿ ಸೂಚಿತವಾಗಿರುವ ಗ್ರಾಮ ಬಂದ ಅಲ್ಲ, ತುಂಬಲ ಎಂದೇ ಹೇಳಬಹುದು.

ಕ್ರಿ. ಶ. ೧೫೫೦ರ ತಿನ ೯೪ರಿಂದ ಮಹಾಮಂಡಳೇಶ್ವರ ಔಭಳರಾಜಯ ಮಹಾಅರಸು ಸೋಮನಾಥಪುರದ ದೇವಾಲಯಗಳಿಗೂ ಬ್ರಾಹ್ಮಣರಿಗೂ ಅವರು ಅರಮನೆಗೆ ತೆರಬೇಕಾಗಿದ್ದ ತೆರಿಗೆಯನ್ನು ಬಿಡಿಸಿದ ವಿಷಯ ತಿಳಿದುಬರುತ್ತದೆ. ಇವನು ಆರವೀಟಿವಂಶದವನು, ಬುಕ್ಕರಾಜನ ಸಂತತಿಗೆ ಸೇರಿದವನು, ರಾಮರಾಜ ತಿಮ್ಮರಾಜ ಯೆರೆದಿಮ್ಮರಾಜನ ಮಗ ಎಂದು ಶಾಸನ ತಿಳಿಸುತ್ತದೆ. ಆರವೀಡುವಂಶದ ಬೇರೆ ಶಾಖೆಯಲ್ಲಿ ಒಂದನೆಯ ರಾಮರಾಜನು ಬುಕ್ಕನ ಮಗನೆಂದು ಕಾಣಿಸಿಕೊಂಡಿದ್ದಾನೆ. ಅವನ ಮಗನಾದ ತಿಮ್ಮನ ಐವರು ಮಕ್ಕಳಲ್ಲಿ ತಿರುಮಲನು ಒಬ್ಬ. ಉಳಿದವರು ಚಿನ್ನ, ತಿಮ್ಮ ಮತ್ತು ಪಾಪ ತಿಮ್ಮ. ಇವರಲ್ಲಿ ಯಾರಿಗೂ ಔಭಳನೆಂಬ ಮಗನಿದ್ದಂತೆ ತೋರುವುದಿಲ್ಲ. ಯೆರೆದಿಮ್ಮರಾಜ ಮತ್ತು ಅವನ ಮಗ ಔಭಳರಾಜರನ್ನು ಗುರುತಿಸುವುದು ಕಷ್ಟವಾಗಿದೆ. ಉಮ್ಮತ್ತೂರು ಶಾಸನವೊಂದು[1] ಔಭಳೇಶ್ವರಮಹಾಅರಸನೊಬ್ಬನನ್ನು ತಿಳಿಸುತ್ತದೆ. ಆದರೆ ಅವನು ಪ್ರಕೃತ ಶಾಸನದಲ್ಲಿರುವವನಿಗಿಂತ ಬೇರೆಯಾಗಿರಬೇಕು.

ಆರವೀಡುವಂಶದ ಶ್ರೀರಂಗರಾಯನಿಗೆ ಸೇರಿದ ಶಾಸನ ಗಳಿಗೇಕೆರೆಯ ಕೃನ ೧೦೪ ಒಂದೇ. ಇದರಲ್ಲಿ ಬಯ್ಯಪ್ಪ ನಾಯಕನ ಮೊಮ್ಮಗ ಕೃಷ್ಣಪ್ಪನಾಯಕನ ಮಗ ವೆಂಕಟಪ್ಪನಾಯಕನು ಹಂಪಾಪುರ ಸ್ಥಳದಲ್ಲಿದ್ದ ಗಳಿಗೆಕೆರೆಯನ್ನು ತನ್ನ ತಾಯಿ ರಾಮಮ್ಮನ ಹೆಸರಿನಿಂದ ರಾಮಪುರವೆಂದು ಹೆಸರಿಟ್ಟು ದತ್ತಿ ಬಿಟ್ಟಿದ್ದಾನೆಂದು ಹೇಳಿದೆ. ದಾನಿಗೆ ಮಣಿನಾಗಪುರವರಾಧೀಶ್ವರ, ಸಿಂಧುಗೋವಿಂದ ಮೊದಲಾದ ಬಿರುದುಗಳಿವೆ. ಶಾಸನದ ಕಾಲ ಕ್ರಿ.ಶ. ೧೫೭೭. ಸ್ವಾರಸ್ಯವೆಂದರೆ ಬೇಲೂರಿನ ನಾಯಕರಿಗೂ ಇವೇ ಬಿರುದುಗಳಿದ್ದುದು. ಈ ನಾಯಕರ ವಂಶಕ್ಕೆ ಸೇರಿದ್ದ ಕೃಷ್ಣಪ್ಪನಾಯಕನ ಶಕ ೧೬೧೩ ರ ಹೊಳೆನರಸೀಪುರದ ಶಾಸನ[2]ದಲ್ಲಿ ಕೃಷ್ಣ ದೇವರಾಯನು ವೃದ್ಧಪಿತಾಮಹ ಎಂದು ವರ್ಣಿತನಾದ ಎರಕೃಷ್ಣಪ್ಪ ನಾಯಕನ ನಾಯಕತನಕ್ಕೆ ಬೇಲೂರು ಸೀಮೆಯನ್ನು ಕೊಟ್ಟಂತೆ ತಿಳಿಸಿದೆ. ಇಲ್ಲಿ ಕೊಟ್ಟಿರುವ ವಂಶಾವಳಿಯಂತೆ ಬೇಲೂರಿನ ಕೃಷ್ಣಪ್ಪನಾಯಕನ ಮಗನಾದ ವೆಂಕಟಾದ್ರಿನಾಯಕನ ಮಗ ಕೃಷ್ಣಪ್ಪನಾಯಕ. ಪ್ರಕೃತ ಶಾಸನದ ವೆಂಕಟಪ್ಪ ನಾಯಕನೇ ವೆಂಕಟಾದ್ರಿನಾಯಕನಾಗಿದ್ದು ಅವನ ತಂದೆ ಕೃಷ್ಣಪ್ಪನಾಯಕನೇ ಹೊಳೆನರಸೀಪುರ ಶಾಸನದ ಎರಕೃಷ್ಣಪ್ಪ ನಾಯಕ. ಹೊಳೆನರಸೀಪುರದ ಶಾಸನದಲ್ಲಿ ಅವನನ್ನು ಪ್ರಪಿತಾಮಹ ,ಎಂದರೆ ತಾತನ ತಂದೆ ಎಂದು ಹೇಳಲಾಗಿದೆ. ಆದರೆ ಈಗ ಗೊತ್ತಿರುವ ವಂಶಾವಳಿಯಂತೆ ಅವನು ಗಳಿಗೇಕೆರೆ ಶಾಸನದ ಕೃಷ್ಣಪ್ಪನಾಯಕನ ತಾತ. ಆದ್ದರಿಂದ ವೃದ್ಧ ಪ್ರಪಿತಾಮಹ ಎಂಬುದನ್ನು ಸಾಮಾನ್ಯಾರ್ಥದಲ್ಲಿ ಪೂರ್ವಜ ಎಂದಿಟ್ಟುಕೊಳ್ಳಬೇಕಾಗುತ್ತದೆ.

ಒಂದನೆಯ ವೆಂಕಟಪತಿರಾಯನ ಮುಡಕನಪುರ ಶಾಸನವು (ತಿನ ೧೦೩) ದಾನಿಯಾದ ದೇವರಾಯಒಡೆಯನ ತಂದೆ ಜಗದೇವರಾಯಒಡೆಯನನ್ನು ಮಹಾರಾಜಾಧಿರಾಜ ಮಹಾರಾಜ ರಾಜಶ್ರೀ ಎಂದು ವರ್ಣಿಸಿದೆ. ಈತನು ರಾಮರಾಯ ಮತ್ತು ಶ್ರೀರಂಗರಾಯರಿಬ್ಬರಲ್ಲಿಯೂ ಇದ್ದ ಪ್ರಸಿದ್ಧ ದಂಡನಾಯಕನಾದ ಜಗದೇವರಾಯನೇ ಇರಬೇಕು. ಏಕಾಮ್ರನಾಥನ ಜಾಂಬವತೀಕಲ್ಯಾಣದಲ್ಲಿ ಈತನಿಗೆ ನಾಲ್ವರು ಮಕ್ಕಳಿದ್ದು ಅವರಲ್ಲಿ ಇಬ್ಬರ ಹೆಸರು ಜಗತಾಪರಾಯ ಎಂದೂ, ಒಬ್ಬನು ಜಗದೇಕರಾಯನೆಂದೂ, ನಾಲ್ಕನೆಯವನು ಅಂಕುಶನೆಂದೂ ಹೇಳಿದೆ. ಪ್ರಕೃತ ಶಾಸನದ ಜಗದೇವ ರಾಯನು ಇವರಲ್ಲಿ ಯಾರು ಎಂದು ಹೇಳಲು ಸಾಧ್ಯವಿಲ್ಲ.[3] ಕ್ರಿ.ಶ. ೧೬೧೫ರ ಬನ್ನೂರು ಶಾಸನ (ತಿನ ೫೦)ವು ವೆಂಕಟಪತಿಯ ಆಳಿಕೆಯಲ್ಲಿ ಚಾಮರಸವೊಡೆಯನ ಮಗ ರಾಜವೊಡೆಯನು ಬಿಟ್ಟ ದತ್ತಿಯನ್ನು ತಿಳಿಸುತ್ತದೆ. ಈ ರಾಜವೊಡೆಯನು ಮೈಸೂರರಸನಾಗಿದ್ದು ಅವನ ತಂದೆ ಚಾಮರಸನು ಬೋಳಚಾಮರಾಜನೆಂಬುದು ಸ್ಪಷ್ಟ.

---

[1] ಎ ಕ., IV (1975), ಚಾನ ೯೫

[2] ಎ ಕ., V, ಹೊಳೆನರಸೀಪುರ ೧

[3] ಎಂಎಆರ್., 1933 ಪು. 273-74

# ಮೈಸೂರಿನ ಒಡೆಯರು

ರಾಜವೊಡೆಯನು ಮಹಾವಿಷ್ಣುಭಕ್ತನೆಂದು ಪ್ರಸಿದ್ಧನಾಗಿದ್ದಾನೆ. ಯದುಗಿರಿಯ ನಾರಾಯಣ ಅಂದರೆ ಮೇಲುಕೋಟೆಯ ಚೆಲುವರಾಯನು ಅವನ ಕುಲದೈವ. ಆ ದೇವರಿಗಾಗಿ ಕ್ರಿ.ಶ. ೧೬೧೪ರಲ್ಲಿ ತನ್ನ ಹೆಸರಿನಲ್ಲಿ ರಾಜಮುಡಿ ಎಂಬ ರತ್ನಕಿರೀಟವನ್ನು ಒಪ್ಪಿಸಿದನು. ಮೈ ೯೩ನೆಯ ಶಾಸನವನ್ನು ಈ ಕಿರೀಟದ ಪದ್ಮಪೀಠದ ಮೇಲೆ ಕೆತ್ತಲಾಗಿದೆ.

ಕ್ರಿ.ಶ. ೧೬೩೩ನೆಯ ವರ್ಷದ ತಿನ ೨೧೮ ಎರಡು ತಾಮ್ರದ ಹಲಗೆಗಳ ಮೇಲೆ ನಾಗರಿ ಲಿಪಿಯಲ್ಲಿ ಕೊರೆಯಲಾದ ಸಂಸ್ಕೃತ ಶಾಸನ. ಇದರಲ್ಲಿ ಹಳ್ಳಿಕೆರೆ ಮತ್ತು ಅದರ ಉಪಗ್ರಾಮಗಳನ್ನು ದೇವರಾಜಪುರ ಎಂಬ ಹೆಸರಿನಿಂದ ದೇವರಾಜವೊಡೆಯನು ಯೇಡೂರು ವಂಶದ ಶಠಮರ್ಷಣಗೋತ್ರದ ರಾಮಕುಮಾರತಾತಾರ್ಯನ ಮಗ ವೆಂಕಟವರದಾಚಾರ್ಯನಿಗೆ ದಾನಮಾಡಿದನೆಂದಿದೆ. ಪ್ರತಿಗ್ರಹಿಯು ಶ್ರೀಶೈಲವಂಶಕ್ಕೆ ಸೇರಿದ ಇಮ್ಮಡಿ ತಿರುಮಲತಾತಾಚಾರ್ಯನ ಮೊಮ್ಮಗನೂ ಕೋಟಿಕನ್ಯಾದಾನ ಲಕ್ಷ್ಮೀಕುಮಾರ ತಾತಾಚಾರ್ಯನ ಮಗನೂ ಆಗಿದ್ದ ವೆಂಕಟವರದಾಚಾರ್ಯನೇ ಆಗಿರಬಹುದು. ರಾಜಗುರುವಾಗಿದ್ದ ಈತನು ತರ್ಕ ವೇದಾಂತ ಶಾಸ್ತ್ರಗಳಲ್ಲಿ ಪಾರೀಣನಾಗಿದ್ದನೆಂದು ಪ್ರಸಿದ್ಧನಾಗಿದ್ದಾನೆ. ಈ ಶಾಸನವನ್ನು ರಚಿಸಿದವನು ಆಳಸಿಂಗರಾರ್ಯನ ಮಗ ತಿರುಮಲಾಚಾರ್ಯ (ತಿರುಮಲಾರ್ಯ). ಇದೇ ಇವನ ಮೊದಲ ಕಾವ್ಯಶೈಲಿಯ ಸಾಹಿತ್ಯರಚನೆ ಎಂದು ಹೇಳಲಾಗಿದೆ.

ಕ್ರಿ.ಶ. ೧೬೬೦ರ ಮೈ ೯೨ ರಾಜೇಂದ್ರಭಾರತಿಸ್ವಾಮಿ ಎಂಬ ಯತಿಗೆ ಚಂದ್ರಾರ್ಕವಾಟಿಕ (ಚಂದಕವಾಡಿ) ಮತ್ತು ಅದರ ಉಪಗ್ರಾಮಗಳನ್ನು ಇದೇ ದೊರೆಯು ದತ್ತಿ ಬಿಟ್ಟುದನ್ನು ತಿಳಿಸುವ ಮತ್ತೊಂದು ತಾಮ್ರಶಾಸನ. ಕ್ರಿ.ಶ. ೧೬೬೩ರ ನಂಜನಗೂಡಿನ ಶಾಸನವು[1] ರಾಘವೇಂದ್ರಸ್ವಾಮಿ ಮಠದ ರಾಘವೇಂದ್ರತೀರ್ಥಶ್ರೀಪಾದರಿಗೆ ಕೊಟ್ಟ ದತ್ತಿಯನ್ನು ತಿಳಿಸುತ್ತದೆ. ಪ್ರಕೃತ ಶಾಸನದಲ್ಲಿ ಪ್ರತಿಗ್ರಹಿಯು ಯಾವ ಮಠಕ್ಕೆ ಸೇರಿದವನೆಂದು ಹೇಳಿಲ್ಲ. ರಾಘವೇಂದ್ರತೀರ್ಥ ಶ್ರೀಪಾದರು ಸುಧೀಂದ್ರತೀರ್ಥಶ್ರೀಪಾದರ ಶಿಷ್ಯರಾದ್ದರಿಂದ ಪ್ರಕೃತ ಶಾಸನದಲ್ಲಿನ ಗುರು ಬೇರೆಯೇ ಇರಬೇಕು. ರಾಜೇಂದ್ರ ಭಾರತಿಸ್ವಾಮಿಗೆ ರಾಜರಾಜೇಂದ್ರತೀರ್ಥ ಎಂಬ ಹೆಸರೂ ಇದೆ.

ಮೈ ೯೯ ಚಿಕ್ಕದೇವರಾಯವೊಡೆಯರ ಆಳಿಕೆಗೆ ಸೇರಿದ, ಹತ್ತು ಹಲಗೆಗಳಮೇಲೆ ಕಂಡರಿಸಲಾದ, ಸಂಸ್ಕೃತ ಮತ್ತು ಕನ್ನಡ ಭಾಷೆಗಳಲ್ಲಿರುವ ತಾಮ್ರಶಾಸನ. ಕ್ರಿ.ಶ. ೧೬೭೪ರ ಡಿಸೆಂಬರಿನಲ್ಲಿ ಹಾಕಿಸಿರುವ ಈ ಶಾಸನವು ರಾಜನು ದಾದೋಜಿ, ಜೈತಜಿ, ಶಂಭು, ಕುತುಪಷಾಹ ಮತ್ತು ಬಸವರನ್ನು ಸೋಲಿಸಿದುದನ್ನು ತಿಳಿಸುತ್ತದೆ. ಇವರಲ್ಲಿ ಮೊದಲ ಮೂವರು ಬಿಜಾಪುರದ ಸುಲ್ತಾನನ ಕೈಕೆಳಗಿನ ಮರಾಠಾ ಸರದಾರರು. ಕುತುಪಷಾಹನು ಗೋಲ್ಕೊಂಡದ ಸುಲ್ತಾನನಾಗಿದ್ದ ಕುತುಬ್‌ಷಾ, ಮತ್ತು ಬಸವನು ಇಕ್ಕೇರಿಯ ಬಸಪ್ಪನಾಯಕ. ಚಿಕ್ಕದೇವರಾಯನ ಆಳಿಕೆಯಲ್ಲಿ ಇವರೆಲ್ಲರೂ ಮೈಸೂರಿನ ಮೇಲೆ ದಂಡೆತ್ತಿಬಂದು ಸೋತುಹೋಗಿದ್ದರು. ಅವರು ಅನುಭವಿಸಿದ ಇಂಥ ಒಂದು ಸೋಲನ್ನು ಈ ಶಾಸನ ಸೂಚಿಸುವಂತೆ ತೋರುತ್ತದೆ. ಚಿಕ್ಕದೇವರಾಜನು ಪಟ್ಟಕ್ಕೆ ಬಂದಮೇಲೆ ಹತ್ತುವರ್ಷಗಳ ಕಾಲ ಇಂಥ ದಾಳಿ ನಡೆಯುತ್ತಲೇ ಇದ್ದುದು ವಿದಿತ.

ಶಾಸನವನ್ನು ರಚಿಸಿದವನು ರಾಮಾಯಣಂ ತಿರುಮಲೆಯಾರ್ಯ. ಶಾಸನದ ಕಾಲಕ್ಕೆ ಈತನು ರಾಜನ ಬಳಿ ಒಬ್ಬ ಮಂತ್ರಿಯಾಗಿದ್ದರೂ ಶಾಸನದಲ್ಲಿ ಅವನ ಅಧಿಕಾರಸ್ಥಾನದ ಬಗೆಗೆ ಏನೂ ಹೇಳದಿರುವುದು ಆಶ್ಚರ್ಯ.

ಉಕ್ಕಲ್ಗೆರೆಯ ತಿನ ೯೭ ಸೋಮನಾಥಪುರದಲ್ಲಿ ದೇವರಾಜಒಡೆಯನ ಮಗ ಕಂಠೀರವ ಅರಸು ಪಟ್ಟಾಭಿರಾಮ ದೇವಾಲಯವನ್ನು ಕಟ್ಟಿಸಿ ದೇವರಿಗೆ ಉಕ್ಕಲ್ಗೆರೆಗ್ರಾಮವನ್ನು ದತ್ತಿಬಿಟ್ಟುದನ್ನು ತಿಳಿಸುತ್ತದೆ. ಶಾಸನದ ಕಾಲ ಕ್ರಿ.ಶ. ೧೬೭೬; ಚಿಕ್ಕದೇವರಾಜನು ಆಳುತ್ತಿದ್ದ ಕಾಲ. ದಾನಿಯು ಚಿಕ್ಕದೇವರಾಯನ ತಮ್ಮನಾಗಿದ್ದ ಅದೇ ಕಂಠೀರವ ಅರಸನೆಂಬ ಹೆಸರಿನವನಾಗಿರಬಹುದು. ಇವರಿಬ್ಬರೂ ಮುಪ್ಪಿನ ದೇವರಾಜನ ಹಿರಿಯ ಮಗನಾದ ದೊಡ್ಡದೇವರಾಜವೊಡೆಯನ ಮಕ್ಕಳು. ಮುಪ್ಪಿನ ದೇವರಾಜವೊಡೆಯನು ರಾಜ್ಯವನ್ನು ತನ್ನ ತಮ್ಮ ದೇವರಾಜ (ಕೆಂಪದೇವರಾಜ)ನಿಗೆ ಬಿಟ್ಟುಕೊಟ್ಟಿದ್ದನು. ಈ ದೇವರಾಜನನ್ನು ಕಂಠೀರವ ನರಸಿಂಹರಾಜನು ದತ್ತು ಪಡೆದಿದ್ದನು. ದೇವರಾಜನ ನಂತರ ಅವನ ಅಣ್ಣನ ಮಗ ಚಿಕ್ಕದೇವರಾಜನು ಪಟ್ಟಕ್ಕೆ ಬಂದನು. ಚಿಕ್ಕದೇವರಾಜನ ತಮ್ಮನು ಯುವರಾಜನಾಗಿದ್ದನು. ಈ ಇಬ್ಬರನ್ನು ದೇವರಾಜವೊಡೆಯನು ತನ್ನ ಮಕ್ಕಳಂತೆಯೇ ಭಾವಿಸಿದ್ದನು.

---

[1] ಎ ಕ., III (1974), ನಂಗೂ ೧೩೪

ಕೃನ ೭೮ ಮುಂಡೂರು ಗ್ರಾಮದಲ್ಲಿ ದೊರೆತ ಸವೆದುಹೋಗಿರುವ ತುಂಡುಶಾಸನ. ಅದರಲ್ಲಿ ದೊರೆಯುವ ಕಾಲದ ವಿವರಗಳನ್ನು ಕ್ರಿ.ಶ. ೧೬೭೭ ಡಿಸೆಂಬರ್ ೨೮ಕ್ಕೆ ಸರಿಹೊಂದಿಸಬಹುದು. ಇದು ಚಾಮರಾಜವಡೆಯನ ಮೊಮ್ಮಗ ದೇವರಾಜವೊಡೆಯನ ಮಗ ದೇವರಾಜಮಹೀಪಾಲನನ್ನು ಹೆಸರಿಸುತ್ತದೆ. ಆದರೆ ಶಾಸನದ ೮ನೆಯ ಸಾಲು . . ರಾಜವೊಡೆಯನ ಮಗ ರಾಜಮಹಾಪಾಲಕನನ್ನು ಉಲ್ಲೇಖಿಸುವಂತೆ ತೋರುತ್ತದೆ. . . ರಾಜವಡೆಯ ಎಂಬಲ್ಲಿರುವ ರಾಜ ಎಂಬುದು ಒಂದು ಹೆಸರಿನ ಭಾಗವೇ ಹೊರತು ಅದು ಮೈಸೂರು ರಾಜ್ಯದ ಮೂಲಪುರುಷನಾದ ರಾಜ ವೊಡೆಯನನ್ನು ಹೆಸರಿಸುತ್ತದೆನ್ನಲಾಗದು. ಈ ರಾಜವೊಡೆಯನಿಗೆ ರಾಜ (ಇಮ್ಮಡಿರಾಜ) ಎಂಬ ಒಬ್ಬ ಮಗನಿದ್ದುದು ನಿಜ. ಆದರೆ ಈತನಿಗೆ ೧೬೩೭-೩೮ರಲ್ಲಿ ವಿಷವೂಡಿಸಲಾಯಿತು. ಆದ್ದರಿಂದ ಶಾಸನೋಕ್ತ ಕಾಲದಲ್ಲಿ ಆತನು ಆಳುತ್ತಲೇ ಇರಲಿಲ್ಲ. ಅರವತ್ತು ವರ್ಷಗಳ ಮೊದಲು ೧೬೧೭ರಲ್ಲಿಯೂ ಈತನು ಆಳುತ್ತಿರಲಿಲ್ಲ. ಏಕೆಂದರೆ ಈತನ ತಂದೆಯ ಬಳಿಕ ಆತನ ಅಣ್ಣನ ಮಗನಾದ ಚಾಮರಾಜನು ಪಟ್ಟಕ್ಕೆ ಬಂದನು. ಈತನು ಕ್ರಿ. ಶ. ೧೬೫೯ ಮತ್ತು ೧೬೭೨ರ ನಡುವೆ ಆಳಿದ ಚಾಮರಾಜನ ಮೊಮ್ಮಗನೂ ಮುಪ್ಪಿನದೇವನ ಮಗನೂ ಆಗಿದ್ದ ದೇವರಾಜ (ಕೆಂಪಿನದೇವರಾಜ)ನೂ ಆಗಿರಲಾರ. ಆದ್ದರಿಂದ ಇಲ್ಲಿ ಹೆಸರಿಸಿರುವ ರಾಜ ಬಹುಮಟ್ಟಿಗೆ ಕ್ರಿ. ಶ. ೧೬೭೭ರಲ್ಲಿ ಆಳುತ್ತಿದ್ದ ಚಿಕ್ಕದೇವರಾಜನೇ ಇರಬೇಕು. ಶಾಸನದಲ್ಲಿ 'ಪೌತ್ರ' ಎಂಬ ಪದವು ದೇವರಾಜನನ್ನು ಕುರಿತಂತೆಯೇ ಉಪಯೋಗಿಸಿದ್ದು ಶಾಸನದ ಅರ್ಥವು ಚಾಮರಾಜನ ಪೌತ್ರನು ದೇವರಾಜನೆಂದೂ, ಅವನ ಪುತ್ರನು ದೇವರಾಜ ಮಹೀಪಾಲಕನೆಂದೂ ಆಗುತ್ತದೆ. ಚಿಕ್ಕದೇವರಾಜನನ್ನು ಅವನ ಚಿಕ್ಕಪ್ಪ ದೇವರಾಜನು ತನ್ನ ಮಗನೆಂದೇ ಭಾವಿಸಿದ್ದುದನ್ನು ಮೇಲೆ ತಿಳಿಸಿದೆ.

ತನ್ನ ತಂದೆಯು ನಿರ್ಮಿಸಿದ ದೇವರಾಯ ಅಗ್ರಹಾರದಲ್ಲಿದ್ದ ಗೋಪಾಲಸ್ವಾಮಿ ದೇವಾಲಯಕ್ಕೆ ಚಿಕ್ಕದೇವ ರಾಜನು ಬಿಟ್ಟ ಗ್ರಾಮದತ್ತಿಯನ್ನು ಮೈ ೨೧೩ ತಿಳಿಸುತ್ತದೆ. ಈ ದತ್ತಿಯಲ್ಲಿ ತಿರುಮಲೈಯಂಗಾರಿಗೆ ಹಿಂದೆ ಧಾರೆಯೆರೆದುಕೊಟ್ಟಿದ್ದ ತೋಟವನ್ನು ಹೊರತುಪಡಿಸಿದೆ. ಗೋಪಾಲಸ್ವಾಮಿ ದೇವರು ದೊರೆಯ ಮುಖ್ಯಾಶ್ರಿತನಾಗಿದ್ದ ಅಳಶಿಂಗರೈಯ್ಯಂಗಾರಿಗೆ ಪ್ರಸನ್ನನಾಗಿದ್ದನೆಂದು ಶಾಸನ ತಿಳಿಸುತ್ತದೆ.

ಕ್ರಿ. ಶ. ೧೭೨೪ರ ತಿನ ೧ ಇಮ್ಮಡಿ ಕಂಠೀರವ ನರಸರಾಜನ ಮಗ ದೊಡ್ಡಕೃಷ್ಣರಾಜ ಎಂಬ ಹೆಸರಿನಿಂದ ಪ್ರಸಿದ್ಧನಾದ ಒಂದನೆಯ ಕೃಷ್ಣರಾಜವೊಡೆಯನ ಆಳ್ವಿಕೆಗೆ ಸೇರಿದುದು. ಮೂಗೂರ ಪ್ರಭು ಸೋಮರಾಜವೊಡೆಯರ ಮೊಮ್ಮಗ ಕೃಷ್ಣೇಅರಸಿನ ಧರ್ಮಪತ್ನಿ ಚಾಮಮ್ಮಣ್ಣಿಯು ಮಂಟಪವೊಂದನ್ನು ಕಟ್ಟಿಸಿದ ವಿಷಯ ಇದರಲ್ಲಿದೆ.

ಕ್ರಿ. ಶ. ೧೭೪೧ರ ಕೃನ ೧೧೭ ಐದು ತಾಮ್ರದ ಹಲಗೆಗಳ ಮೇಲೆ ನಾಗರಲಿಪಿಯಲ್ಲಿ ಕಂಡರಿಸಲಾದ ಸಂಸ್ಕೃತ, ಕನ್ನಡ ಭಾಷೆಗಳಲ್ಲಿರುವ ಶಾಸನ. ದಳವಾಯಿ ದೇವರಾಜನ ತಮ್ಮ ಸರ್ವಾಧಿಕಾರಿ ಕಳಲೆಯ ನಂಜರಾಜನ ಕೋರಿಕೆಯ ಮೇರೆಗೆ ಕಣ್ವಪುರಿ (ಕನ್ನಂಬಾಡಿ)ಗೆ ಸೇರಿದ ನಂಜರಾಜಸಮುದ್ರ ಎಂಬ ಅಗ್ರಹಾರವನ್ನು ಇಮ್ಮಡಿ ಕೃಷ್ಣರಾಜವೊಡೆಯನು ದತ್ತಿಬಿಟ್ಟನೆಂದು ಇದರಲ್ಲಿ ಹೇಳಿದೆ. ಈ ನಂಜರಾಜನು ಬಸವರಾಜನ ಮಗ ನಂಜರಾಜನು ತೀರಿಕೊಂಡನಂತರ ಕ್ರಿ. ಶ. ೧೭೩೯ರಲ್ಲಿ ಸರ್ವಾಧಿಕಾರಿಯಾದನು. ಮೈಸೂರಿನ ಒಡೆಯರು ಮತ್ತು ಕಳಲೆ ಅರಸರ ವಂಶಾವಳಿಯನ್ನು ಈ ಶಾಸನ ಕೊಡುತ್ತದೆ.

ಕ್ರಿ. ಶ. ೧೭೪೯ರ ತಿನ ೧೬ ದೀರ್ಘಶಾಸನಗಳಲ್ಲೊಂದು. ಹಲಗೆಯ ಒಂದೊಂದು ಮುಖದ ಮೇಲೂ ಸರಾಸರಿ ೪೫ ಸಾಲುಗಳಂತೆ ಒಟ್ಟು ೧೩೯೦ ಸಾಲುಗಳನ್ನು ಇದರ ಹದಿನಾರು ಹಲಗೆಗಳ ಮೇಲೆ ನಾಗರಿಯಲ್ಲಿ ಕಂಡರಿಸಿದೆ. ಇದರಲ್ಲಿಯೂ ಮೈಸೂರು ದೊರೆಗಳು ಮತ್ತು ಕಳಲೆ ಅರಸರ ವಂಶಾವಳಿಗಳಿವೆ. ಆದರೆ ಕಳಲೆ ವಂಶವನ್ನು ವಿವರಿಸುವಾಗ ಕಾಂತರಾಜನ (ಕೃನ ೧೧೭ರ ಶ್ರೀಕಾಂತ) ತಂದೆ ತಿಮ್ಮರಾಜನೇ ಮೊದಲನೆಯವನಾಗಿ ಕಾಣಿಸಿಕೊಳ್ಳುತ್ತಾನೆ. ಅಲ್ಲದೆ ಕೃನ ೧೧೭ರಲ್ಲಿ ಶ್ರೀಕಾಂತನ ಹಿರಿಯಮಗ ನಂಜರಾಜನ ಪೀಳಿಗೆಯನ್ನು ಕ್ರಿ. ಶ. ೧೭೩೦ರವರೆಗೆ ಸರ್ವಾಧಿಕಾರಿಯಾಗಿದ್ದ ಆವನ ಮೊಮ್ಮಗ ನಂಜರಾಜನವರೆಗೂ ತಿಳಿಸಿದ್ದು ದೊಡ್ಡಯ್ಯನ ಪೀಳಿಗೆಯನ್ನು ಮುಂದುವರಿಸಿದೆ. ಪ್ರಕೃತ ಶಾಸನವು ನಂಜರಾಜನ ನಂತರ ದೊಡ್ಡಯ್ಯನ ಪೀಳಿಗೆಯನ್ನು ಮುಂದುವರಿಸಿ ಅವನ ಮಕ್ಕಳಾದ ದೇವರಾಜ, ನಂಜರಾಜರವರೆಗೂ ಕೊಂಡೊಯ್ಯುತ್ತದೆ. ವೀರರಾಜನ ಮಗ ದಳವಾಯಿ ದೇವರಾಜನನ್ನು ಚನ್ನಾಜಮ್ಮನ ಮಗನೆಂದು ಹೇಳಿದೆ. ಈಕೆಯನ್ನು ಪ್ರತ್ಯೇಕವಾಗಿ ಹೆಸರಿಸಿರುವುದರಿಂದ ಈಕೆ ನಂಜರಾಜನ ತಾಯಿಯಾಗಿದ್ದಳೆಂದು ಹೇಳಲಾಗುವುದಿಲ್ಲ.

ಇದೇ ರಾಜನ ಮತ್ತೆರಡು ತಾಮ್ರಶಾಸನಗಳು (ಕೃನ ೪೬ ಮತ್ತು ೪೭) ಕ್ರಿ. ಶ. ೧೭೬೧ರ ಕಾಲದವು. ಕೃನ ೪೬ ಬರಗೂರು ಮತ್ತು ಅದರ ೧೨ ಉಪಗ್ರಾಮಗಳನ್ನು ಕೃಷ್ಣರಾಜಸಮುದ್ರವೆಂಬ ಅಗ್ರಹಾರವನ್ನಾಗಿ ಮಾಡಿ ೮೦ ವೃತ್ತಿಗಳನ್ನಾಗಿ ವಿಭಾಗಿಸಿ ಬ್ರಾಹ್ಮಣರಿಗೆ ದತ್ತಿ ಬಿಟ್ಟುದನ್ನೂ ಕೃನ ೪೭ ಹನ್ನೆರಡು ಗ್ರಾಮಗಳನ್ನು ತನ್ನ ತಾಯಿಯ ಹೆಸರಿನಿಂದ ದೇವಾಂಬಾಸಮುದ್ರವೆಂಬ ಅಗ್ರಹಾರವನ್ನು ಮಾಡಿ ೨೫ ವೃತ್ತಿಗಳನ್ನಾಗಿ ವಿಭಾಗಿಸಿರುವುದನ್ನು ತಿಳಿಸುತ್ತವೆ.

ಇವುಗಳಲ್ಲಿ ಪ್ರತಿಗ್ರಹಿಗಳಿಗೆ ವೃತ್ತಿಯೊಂದಿಗೆ ಹಾಸಿಗೆ, ದಿಂಬು, ಪೀಠೋಪಕರಣಗಳು, ದೇವೋಪಕರಣಗಳು, ಗೃಹೋಪಕರಣಗಳು ಮತ್ತು ಸರ್ವಸಾಂಭಾರಗಳಿಂದ ತುಂಬಿದ ಮನೆಗಳನ್ನೂ ಒದಗಿಸಿದ ವಿವರಗಳಿವೆ.

ಮೈಸೂರು ನಗರದಲ್ಲಿ ದೊರೆತ ಶಾಸನಗಳು, ದೇವಾಲಯಗಳ ನಿರ್ಮಾಣಕ್ಕೆ ಅಗ್ರಹಾರಗಳ ಸ್ಥಾಪನೆಗೆ ಸಂಬಂಧಿಸಿದಂತೆ ಕೆಲವು ಸ್ವಾರಸ್ಯವಾದ ಸಂಗತಿಗಳನ್ನು ಹೇಳುತ್ತವೆ. ವೈ ೧-೩ ಕ್ರಿ.ಶ. ೧೮೪೭ನೆಯ ಸೆಪ್ಟೆಂಬರ್ ೨೮ರಂದು ಹುಟ್ಟಿದ ಶಾಸನಗಳು. ಮುಮ್ಮಡಿ ಕೃಷ್ಣರಾಜವೊಡೆಯರ ಮೂವರು ಧರ್ಮಪತ್ನಿಯರಾದ ದೇವಪ್ಪಾಜಿ, ಲಿಂಗಾಜಮ್ಮಣ್ಣಿ ಮತ್ತು ಚಲುವಾಜಮ್ಮಣ್ಣಿಯವರು ತಮ್ಮ ತಮ್ಮ ಹೆಸರುಗಳಲ್ಲಿ ಕ್ರಮವಾಗಿ ದೇವಾಂಬಾ, ಲಿಂಗಾಂಬಾ ಮತ್ತು ಚಲುವಾಂಬಾ ಅಗ್ರಹಾರಗಳನ್ನು ತಾವುಗಳು ವಾಸಿಸುತ್ತಿದ್ದ ಅರಮನೆಯ ಭಾಗಗಳಾದ ಲಕ್ಷ್ಮೀವಿಲಾಸ ಕೃಷ್ಣವಿಲಾಸ ಮತ್ತು ರಮಾವಿಲಾಸಗಳೆಂಬ ಹೆಸರಿನಿಂದಲೂ ಸ್ಥಾಪಿಸಿದರು. ಪಟ್ಟಮಹಿಷಿಯಾದ ದೇವಾಂಬಾ ಪ್ರಸನ್ನ ನಂಜುಂಡೇಶ್ವರ ದೇವಾಲಯವನ್ನು ಕಟ್ಟಿಸಿದಳು. ಉಳಿದಿಬ್ಬರು ಕ್ರಮವಾಗಿ ಪರಕಾಲ ಹಾಗೂ ಅಹೋಬಲ ಮಠಗಳನ್ನೂ ತಮ್ಮ ತಮ್ಮ ಅಗ್ರಹಾರಗಳಲ್ಲಿ ಕಟ್ಟಿಸಿದರು. ಪರಕಾಲಮಠದಲ್ಲಿ ಹಯಗ್ರೀವವಿಗ್ರಹವನ್ನು ಅಹೋಬಲ ಮಠದಲ್ಲಿ ಲಕ್ಷ್ಮೀನರಸಿಂಹವಿಗ್ರಹವನ್ನೂ ಪ್ರತಿಷ್ಠಾಪಿಸಲಾಯಿತು. ಇವುಗಳಿಗೆ ಪ್ರತ್ಯೇಕವಾದ ವೃತ್ತಿಗಳನ್ನೂ ಬಿಡಲಾಯಿತು.

ಅರಮನೆಯ ಕೋಟೆಯೊಳಗಿನ ಪ್ರಸನ್ನಕೃಷ್ಣಸ್ವಾಮಿ ದೇವಾಲಯವನ್ನು ಕ್ರಿ. ಶ. ೧೮೨೯ರಲ್ಲಿ ಇದೇ ಮುಮ್ಮಡಿ ಕೃಷ್ಣರಾಜವೊಡೆಯನು ಕಟ್ಟಿಸಿದನು (ವೈ ೩೭). ಈ ಸಂದರ್ಭದಲ್ಲಿ ಈತನು ನವರತ್ನಗಳೆಂಬ ಸೇವೆಗಳನ್ನು ಸಲ್ಲಿಸಿದುದನ್ನು ಶಾಸನದಲ್ಲಿ ಪ್ರಸ್ತಾಪಿಸಲಾಗಿದೆ. ಮೇಲುಕೋಟೆ ಮುಂತಾದ ಸ್ಥಳಗಳಲ್ಲಿ ಕೃಷ್ಣರಾಜಮುಡಿ ಮುಂತಾದ ರತ್ನಮಯ ಆಭರಣಗಳನ್ನು ಸಮರ್ಪಿಸಿದ ಭೂಷಾರತ್ನ; ಚಾಮರಾಜನಗರ ಮುಂತಾದ ಪುರಗಳನ್ನು ನಿರ್ಮಿಸಿದ ದೇಶರತ್ನ; ದೇವಾಲಯಗಳನ್ನು ಕಟ್ಟಿಸುವಂತಹ ಸೇವಾರತ್ನ; ಸೋಪಸ್ಕರ ಸಹಿತವಾದ ಮನೆಗಳನ್ನು ಭೂಮಿ ಗ್ರಾಮಗಳನ್ನು ಧಾರೆ ಎರೆಯುವ ದಾನರತ್ನ: ಚಾಮುಂಡೇಶ್ವರಿ, ಶ್ರೀಕಂಠೇಶ್ವರ ಮುಂತಾದ ದೇವಾಲಯಗಳಿಗೆ ಗೋಪುರಗಳನ್ನು ಕಟ್ಟಿಸುವ ಪ್ರತಿಷ್ಠಾರತ್ನ; ಕಾವೇರಿ ಮುಂತಾದ ನದಿಗಳಿಗೆ ಕಟ್ಟೆಗಳನ್ನು ಕಟ್ಟಿಸುವ ಉಪಕಾರರತ್ನ; ಕಾಶಿ, ಶ್ರೀರಂಗ ಇತ್ಯಾದಿ ಸ್ಥಳಗಳಲ್ಲಿ ಅನ್ನಸತ್ರಗಳನ್ನು ಕಟ್ಟಿಸುವ ಧರ್ಮರತ್ನ, ಸುವರ್ಣರಜತನಾಣ್ಯಗಳನ್ನು ಅಚ್ಚುಹಾಕಿಸುವ ಕೀರ್ತಿರತ್ನ ಮತ್ತು ಭಾಗವತಾದಿ ಗ್ರಂಥಗಳಿಗೆ ಕರ್ನಾಟಕ ಭಾಷೆಯಲ್ಲಿ ವ್ಯಾಖ್ಯಾನಗಳನ್ನೂ ಸೌಗಂಧಿಕಾಪರಿಣಯ ಮೊದಲಾದ ಕಾವ್ಯ ಪ್ರಬಂಧಗಳನ್ನು ಬರೆಯುವ ಸಾರಸ್ವತರತ್ನ—ಇವು ಆ ನವರತ್ನಗಳು. ಇದರಿಂದ ಅರಸನು ಮಾಡಿದ ಮಹತ್ಕಾರ್ಯಗಳನ್ನು ತಿಳಿಸಿದಂತಾಗಿದೆ. ಭಾಗವತ ಮತ್ತು ಅಧ್ಯಾತ್ಮ ರಾಮಾಯಣಗಳಿಗೆ ಈತನು ಕನ್ನಡದಲ್ಲಿ ವ್ಯಾಖ್ಯಾನಗಳನ್ನು ರಚಿಸಿದ ಹಾಗೂ ಸೌಗಂಧಿಕಾಪರಿಣಯವೆಂಬ ಗ್ರಂಥವನ್ನೂ ರಚಿಸಿದ ವಿಷಯ ಸಹ ಇದರಿಂದ ನಮಗೆ ನೇರವಾಗಿ ತಿಳಿದುಬಂದಂತಾಗಿದೆ. ಪ್ರಸನ್ನಕೃಷ್ಣಸ್ವಾಮಿ ದೇವಾಲಯದಲ್ಲಿ ಪ್ರತಿಷ್ಠಾಪಿಸಲಾದ ಪೆರುಂದೇವಿ ಅಮ್ಮನವರ ವಿಗ್ರಹವನ್ನು ಮೂಲತಃ ಕಾಂಚಿಯಿಂದ ತರಲಾಗಿದ್ದು ಕೆಲಕಾಲ ತೆರಕಣಾಂಬಿಯಲ್ಲಿ ಇರಿಸಿದ್ದರೆಂದೂ ಇದರಿಂದ ನಮಗೆ ತಿಳಿದು ಬರುತ್ತದೆ.

ಅದೇ ದೇವಾಲಯದಲ್ಲಿ ತುಲಾಭಾರದ ಕಲ್ಲಿನ ಅಡ್ಡತೊಲೆಯ ಮೇಲೆ ಕೆತ್ತಲಾದ ಶಾಸನದಲ್ಲಿ (ವೈ ೬೩) ಅರಸನು ಚಿಕ್ಕಪುಟ್ಟತಾಯಮ್ಮಣ್ಣಿಯೊಡನೆ ಎರಡನೆಯ ಬಾರಿ ಕ್ರಿ. ಶ. ೧೮೩೮ರಲ್ಲಿ ತುಲಾಭಾರ ಮಾಡಿಸಿಕೊಂಡಾಗ ಆ ಕಂಬವನ್ನು ಸ್ಥಾಪಿಸಲಾಯಿತೆಂದು ಹೇಳಿದೆ. ವೈ ೨೮ರಲ್ಲಿ ಕೊಟ್ಟಿರುವ ಈ ವಂಶದ ಅರಸರ ವಂಶಾವಳಿಯಲ್ಲಿ ಮುಮ್ಮಡಿ ಕೃಷ್ಣರಾಜವೊಡೆಯನ ಇಪ್ಪತ್ತು ಅರಸಿಯರ ಹೆಸರುಗಳನ್ನು ಕೊಟ್ಟಿದೆ. ಪ್ರಸ್ತುತ ಶಾಸನದಲ್ಲಿ ಉಕ್ತವಾದ ಚಿಕ್ಕಪುಟ್ಟತಾಯಮ್ಮಣ್ಣಿಯ ಹೆಸರು ಅದರಲ್ಲಿಲ್ಲ. ಆದರೆ ಅರಸನ ೧೨ನೆಯ ಪತ್ನಿ ಚಂದ್ರವಿಲಾಸದ ಬಸವಾಜಾಂಬಳಿಗೆ ಈ ಹೆಸರಿನ ಮೊಮ್ಮಗಳಿದ್ದಳು. ಈಕೆ ಪುಟ್ಟತಾಯಮ್ಮಣ್ಣಿಯ ಮಗಳು. ಶಾಸನದಲ್ಲಿ ಹೆಸರಿಸಲಾದ ಚಿಕ್ಕಪುಟ್ಟತಾಯಮ್ಮಣ್ಣಿ ಈಕೆಯೇ ಆಗಿರಬಹುದೇ? ಈಕೆಯೊಂದಿಗೇ ಅರಸನು ತುಲಾಭಾರ ಮಾಡಿಸಿಕೊಂಡುದನ್ನು ಶಾಸನ ಸೂಚಿಸುತ್ತದೆಯೇ?

## ಚಂಗಾಳ್ವರು

ಈ ಸಂಪುಟದಲ್ಲಿ ಚಂಗಾಳ್ವರಿಗೆ ಸೇರಿದ ಶಾಸನಗಳೆಲ್ಲಾ ಕೃಷ್ಣರಾಜನಗರ ತಾಲ್ಲೂಕಿನಲ್ಲಿವೆ. ಇದರಲ್ಲಿ ಪ್ರಕಟವಾಗಿರುವ ೧೨ ಶಾಸನಗಳಲ್ಲಿ ಆರು ಶಾಸನಗಳು ಈ ಮನೆತನದ ೧೨ನೆಯ ಶತಮಾನಕ್ಕೂ ಮೊದಲ ಅರಸರಿಗೆ ಸೇರಿದ್ದು, ರಾಜೇಂದ್ರಚೋಳ ಮತ್ತು ವೀರರಾಜೇಂದ್ರಚೋಳ ನನ್ನಿಚಂಗಾಳ್ವರ ಚಿಕ್ಕಹನಸೋಗೆಯ ಶಾಸನಗಳನ್ನು ಕುರಿತು

# ಉಮ್ಮತ್ತೂರರಸರು

ಈ ಅರಸರ ಸುಮಾರು ೧೨ ಶಾಸನಗಳು ನಾಲ್ಕನೆಯ ಸಂಪುಟದಲ್ಲಿವೆ. ಪ್ರಸ್ತುತ ಸಂಪುಟದಲ್ಲಿನ ಮತ್ತೆ ಮೂರು ಶಾಸನಗಳು ಅವರಿಗೆ ಸೇರಿವೆ. ಇವು ಪರಿಷ್ಕೃತ ಮೂರನೆಯ ಸಂಪುಟ (೧೯೭೪)[1]ದಲ್ಲಿ ಕೊಟ್ಟಿರುವ ಇವರ ವಂಶಾವಳಿಯ ಮೇಲೆ ಹೆಚ್ಚಿನ ಬೆಳಕನ್ನು ಚೆಲ್ಲುತ್ತವೆ. ನಾಲ್ಕನೆಯ ಸಂಪುಟದಲ್ಲಿನ ಕ್ರಿ. ಶ. ೧೪೮೨ರ ಚಾನ ೩೧೦ನೆಯ ಶಾಸನದಲ್ಲಿ ಕಂಡುಬರುವ ವೀರಸೋಮೆಯರಾಯನು ಇಮ್ಮಡಿ ರಾಯವೊಡೆಯನೆಂಬ ಹೆಸರನ್ನುಳ್ಳ ವೀರಸೋಮೆಯರಾಯನೇ ಇರಬೇಕು. ಆತನ ಮಗ ವೀರನಂಜರಾಯನ ಶಾಸನಗಳು ಇದೇ ವರ್ಷದಿಂದ ಆರಂಭವಾಗುವುದರಿಂದ ಈ ವರ್ಷವು ಸೋಮೆಯರಾಯನ ಕಡೆಯ ವರ್ಷವೆಂದು ನಾವು ಅಂಗೀಕರಿಸಬಹುದು. ಅದೇ ಸಂಪುಟದ ಮತ್ತೊಂದು ಶಾಸನವು (ಚಾನ ೨೭೪) ಇಮ್ಮಡಿ ರಾಯವೊಡೆಯನ ಮಗ ದೇಪಣ್ಣವೊಡೆಯನಿಗೆ ಸೇರಿದುದು. ಇದರ ಕಾಲ ಕ್ರಿ. ಶ. ೧೪೬೫. ಪ್ರಸ್ತುತ ಸಂಪುಟದ ತಾಮ್ರಶಾಸನವು (ಕೃನ ೮೦) ಇದೇ ಅರಸನನ್ನು ಉಮ್ಮತ್ತೂರಿನ ಇಮ್ಮಡಿ ದೇಪಣ್ಣನೆಂದು ಸೂಚಿಸಿದೆ. ಇದರ ಕಾಲ ಕ್ರಿ.ಶ. ೧೪೬೭. ನಾಲ್ಕನೆಯ ಸಂಪುಟದ ಚಾನ ೨೨೧ ಕ್ರಿ. ಶ. ೧೫೧೨ರ ಕಾಲದ್ದಿದ್ದು ದೇಪಣ್ಣವೊಡೆಯನ ಮಗ ನಂಜರಾಯವೊಡೆಯನದಾಗಿದೆ. ದೇಪಣ್ಣನ ಮಕ್ಕಳಾದ ಚಿಕ್ಕರಾಯ ಮತ್ತು ಗೋವಣ್ಣರಿಗಿಂತ ಇವನು ಬೇರೆಯಾಗಿರಬೇಕು. ಕ್ರಿ. ಶ. ೧೫೦೧ರ ಚಾನ ೭೧ನೆಯ ಶಾಸನದ ವೀರಚನ್ನನಂಜರಾಯನು ಕ್ರಿ. ಶ. ೧೪೯೭ರಲ್ಲಿದ್ದ ಇದೇ ಹೆಸರಿನ ನಂಜರಾಯನ ಮಗನೇ ಆಗಿರಬೇಕು. ಆದರೆ ಕ್ರಿ. ಶ. ೧೫೧೧ರ ಚಾನ ೩೦೦ ವೀರನಂಜರಾಯನ ಮಗ ಚಿಕ್ಕರಾಯನನ್ನು ಹೆಸರಿಸುತ್ತದೆ. ಆತನು ದೇಪಣ್ಣನ ಮಗ ಚಿಕ್ಕರಾಯನಿಂದ ಭಿನ್ನನೆಂಬುದು ಸ್ಪಷ್ಟ. ಬಹುಶಃ ಇವನು ಮೇಲೆ ತಿಳಿಸಿರುವ ನಂಜರಾಯನ ಮಗ ವೀರಚನ್ನನಂಜರಾಯನ ಸೋದರನಿರಬಹುದು. ಕ್ರಿ. ಶ. ೧೫೧೨ರ ಕೊಗಾ ೭ನೆಯ ಶಾಸನದಲ್ಲಿ ವೀರನಂಜರಾಯನ ಮಗ ಇಮ್ಮಡಿ ಚಿಕ್ಕರಾಯನೆಂದು ತಿಳಿಸಿರುವುದು ಈತನನ್ನೇ ಕುರಿತದ್ದು. ಇಲ್ಲಿ ಅವನನ್ನು ದೇಪಣ್ಣನ ಮಗ ಚಿಕ್ಕರಾಯನಿಂದ ಬೇರೆಯಾಗಿ ಗುರುತಿಸಲೆಂದೇ ಇಮ್ಮಡಿ ಎಂಬುದನ್ನು ಸೇರಿಸಿರಬೇಕು. ಈ ಮೇಲಿನ ಆಧಾರಗಳಿಂದ ಇಮ್ಮಡಿ ರಾಯವೊಡೆಯನಿಂದೀಚಿನ ವಂಶಾವಳಿಯನ್ನು ಈ ರೀತಿ ತಿದ್ದಬಹುದು.

ಇಮ್ಮಡಿ ರಾಯವೊಡೆಯ
(ಸೋಮರಾಯ)




ಕ್ರಿ. ಶ. ೧೫೩೦ರ ತಿನ ೨೪೯ನೆಯ ಶಾಸನವು ವೀರದೇವಣ್ಣವೊಡೆಯನ ಆಳಿಕೆಗೆ ಸಂಬಂಧಿಸಿದುದು. ಅವನನ್ನು ಉಮ್ಮತ್ತೂರರಸನೆಂದು ತೆಗೆದುಕೊಂಡಿದ್ದೇವೆ. ಆದರೆ ಅದು ಸಂದೇಹಾಸ್ಪದ. ಇದೇ ಕಾಲದ ಬಸವಟ್ಟಿಗೆಯ ಶಾಸನದಲ್ಲಿ[2] ಉಮ್ಮತ್ತೂರರಸರ ಎಲ್ಲಾ ಬಿರುದುಗಳನ್ನೂ ಹೊಂದಿದ್ದ ವೀರಮಲ್ಲರಾಜವೊಡೆಯನ ಹೆಸರಿದ್ದು ತಿನ ೨೪೯ರ ದೇವಣ್ಣಯ್ಯವೊಡೆಯನಿಗೆ ಯಾವ ಬಿರುದುಗಳೂ ಇಲ್ಲ.

ಈ ಸಂದರ್ಭದಲ್ಲಿ ಒಂದು ಕುತೂಹಲಕರವಾದ ವಿಷಯವನ್ನು ಗಮನಿಸಬೇಕು. ದುಗ್ಗಹಟ್ಟಿ ಶಾಸನವು[3] ಉಮ್ಮತ್ತೂರರಸನೆನಿಸಿದ ಮಹಾಮಂಡಲೇಶ್ವರ ಗಂಗರಾಜವೊಡೆಯನ ತಾಯಿ ದೇವರಾಸಿಯಮ್ಮನು ಕೊಟ್ಟ ದತ್ತಿಯನ್ನು ತಿಳಿಸುತ್ತದೆ. ಇದರ ಕಾಲ ಕ್ರಿ.ಶ. ೧೫೧೧ ಜುಲೈ ೨೨; ವೀರನಂಜರಾಯನ ಮಗ ಚಿಕ್ಕರಾಯನಿಗೆ ಸೇರಿದ ಅದೇ ವರ್ಷದ ಜನವರಿ ೨೧ರ ಚಾನ ೩೦೦ಕ್ಕಿಂತ ಆರು ತಿಂಗಳು ಈಚಿನದು. ಇದೇ ಅರಸನು ಕ್ರಿ.ಶ. ೧೫೧೨ರ ಮೇ ೩೦ರಂದು ಆಳುತ್ತಿದ್ದನೆಂದು ಮೇಲೆ ತೋರಿಸಿದೆ. ದುಗ್ಗಹಟ್ಟಿ ಶಾಸನದಿಂದ ಗಂಗರಾಜನಿಗೂ ಇತರರಿಗೂ ಇದ್ದ ಸಂಬಂಧ ವ್ಯಕ್ತವಾಗುವುದಿಲ್ಲ. ಅವನ ತಾಯಿಯು ದತ್ತಿ ಬಿಟ್ಟುದನ್ನು ಈ ಶಾಸನ ತಿಳಿಸಿರುವುದರಿಂದ ಅವನು ಆಳುತ್ತಿದ್ದನೇ ಎನ್ನುವುದನ್ನು ಸ್ಪಷ್ಟ

1 ಪೀಠಿಕೆ ಪು. ೮೪

2 ಎಕ., ಸಂಪುಟ III (1974), ನಂಗೂ ೩೩೮

3 ಸಂಪುಟ IV (1975), ಯಳಂ ೧೨

ಈಗಾಗಲೇ ಪ್ರಸ್ತಾಪಿಸಿದ್ದೇವೆ, ಅದೇ ಗ್ರಾಮದಲ್ಲಿ ದೊರೆತ ಇನ್ನೊಂದು ಶಾಸನ (ಕೃನ ೪೩)ದಲ್ಲಿ ಬೊಪ್ಪದೇವನು ಆಳುತ್ತಿದ್ದನೆಂದಿದೆ. ಈತನನ್ನು ಕುಲೋತ್ತುಂಗಚೋಳಭುಜಬಳಚಂಗಾಳುವನೆಂದು ಕರೆಯಲಾಗಿದೆ. ಕ್ರಿ. ಶ. ೧೧೨೪ನೆಯ ವರ್ಷದ ಅಡಗೂರಿನ ಎರಡು ಶಾಸನಗಳು[1] ಕುಲೋತ್ತುಂಗಚೋಳಭುಜಬಲಚಂಗಾಳ್ವನವು. ಅವುಗಳಲ್ಲಿ ಆತನ ಹೆಸರನ್ನು ಕೊಟ್ಟಿಲ್ಲ. ಎರಡು ವರ್ಷಗಳ ಮೊದಲು, ೧೧೨೨ರಲ್ಲಿ ಕುಲೋತ್ತುಂಗಚೋಳ ಚಂಗಾಳ್ವನೆಂಬ ಇನ್ನೊಬ್ಬ ಅರಸನು ಆಳುತ್ತಿದ್ದುದು ತಿಳಿದಿದೆ.[2] ಈ ಮೂರು ಶಾಸನಗಳಲ್ಲಿನ ಅರಸ ಒಬ್ಬನೇ ಆಗಿರಬಹುದಾದ ಸಾಧ್ಯತೆ ಇದೆ. ಒಡೆಯಾದಿತ್ಯ ಹಾಗೂ ಆತನ ನಂತರ ಬಂದ ಅರಸರು ಕುಲೋತ್ತುಂಗಚೋಳ ಎಂಬ ಬಿರುದನ್ನು ಪಡೆದಿದ್ದರೆಂದು ನಾನು ಹೇಳಿದ್ದೇನೆ.[3] ಮೇಲೆ ಉಲ್ಲೇಖಿಸಿದ ಶಾಸನಗಳಲ್ಲಿ ಅರಸನ ಹೆಸರನ್ನು ಕೊಟ್ಟಿಲ್ಲ. ಸದ್ಯ ಪರಿಶೀಲಿಸುತ್ತಿರುವ ಶಾಸನದಲ್ಲಿ ಉಕ್ತನಾದ ಬೊಪ್ಪದೇವನೇ ಆ ಶಾಸನಗಳಲ್ಲಿ ಕಾಣಿಸಿಕೊಳ್ಳುವ ಕುಲೋತ್ತುಂಗಚೋಳನಾಗಿರಬಹುದು.

ಸುಮಾರು ೧೫ನೆಯ ಶತಮಾನಕ್ಕೆ ಸೇರಿದ ಮಿರ್ಲೆ ಶಾಸನ (ಕೃನ ೯೩)ದಲ್ಲಿ ತೆಂಗಾಳ್ವದೇವನ ಪ್ರಸ್ತಾಪವಿದೆ. ಬಹುಶಃ ಚಂಗಾಳ್ವ ಎನ್ನಲು ತಪ್ಪಾಗಿ ತೆಂಗಾಳ್ವ ಎಂದಿರಬಹುದು . ಆದರೆ ಈತನನ್ನು ಗುರುತಿಸಲು ಸಾಧ್ಯವಿಲ್ಲ,

ನಂತರದ ಚಂಗಾಳ್ವರ ಮೂರು ಶಾಸನಗಳಲ್ಲಿ (ಕೃನ ೧೩, ೧೪ ಮತ್ತು ೧೬) ರುದ್ರಗಣನನ್ನು ಹೆಸರಿಸಿದ್ದು ಅವನನ್ನು ನಂಜರಾಯಪಟ್ಟಣದ ರುದ್ರಗಣನೆಂದು ಎರಡರಲ್ಲಿ (ಕೃನ ೧೪ ಮತ್ತು ೧೬) ಕರೆಯಲಾಗಿದೆ.

ಕೃನ ೧೬ರಲ್ಲಿ ಈತನು ಚನ್ನಯ್ಯನ ಮಗನೆಂದಿದೆ. ಆದರೆ ಅದೇ ಶಾಸನದಲ್ಲಿ ಈತ ತನ್ನ ತಂದೆ–ತಾಯಿಗಳಾದ ಶ್ರೀಕಂಠರಾಜಯ್ಯ ಮತ್ತು ವಲ್ಲಭಾಜಮ್ಮನವರಿಗೆ ಪುಣ್ಯವಾಗಬೇಕೆಂದು ದಾನ ಮಾಡಿದುದಾಗಿ ಹೇಳಿದೆ. ಇಂತಹ ಮಾತು ಹಾರನಹಳ್ಳಿ ಶಾಸನದಲ್ಲಿಯೂ ಕಂಡುಬಂದಿದೆ. ಚನ್ನಯ್ಯ ಎಂಬುದು ಶ್ರೀಕಂಠರಾಜಯ್ಯನ ಇನ್ನೊಂದು ಹೆಸರಿರಬಹುದೆಂದು ನಾನು ಈ ಮೊದಲೇ ಮಾಡಿದ ಊಹೆಗೆ[4] ಸಮರ್ಥನೆ ಈ ಶಾಸನದಿಂದಲೂ ದೊರೆಯುತ್ತದೆ.

ಕ್ರಿ.ಶ. ೧೬೩೪ನೆಯ ವರ್ಷದ ಕೃನ ೧೮ ಮತ್ತು ೧೯ನೆಯ ಶಾಸನಗಳು ವೀರರಾಜದೇವನದು. ಮೊದಲನೆಯದರಲ್ಲಿ ಆತನು ವೀರನಂಜುಂಡದೇವನ ಮೊಮ್ಮಗನೆಂದೂ ನಂಜರಾಜದೇವನ ಮಗನೆಂದೂ ಹೇಳಿದೆ. ಆದರೆ ಇನ್ನೊಂದರಲ್ಲಿ ತಂದೆಯ ಹೆಸರು ಶ್ರೀಕಂಠರಾಜನೆಂದಿದೆ. ಈ ವೀರರಾಜನು ನಂಜರಾಜನ ಮಗನಾದ ನಂಜುಂಡನ ಮೊಮ್ಮಗ ಶ್ರೀಕಂಠನ ಮಗನೆಂದು ನಮಗೆ ತಿಳಿದಿದೆ. ಎಂದ ಬಳಿಕ ಶ್ರೀಕಂಠನಿಗೆ ನಂಜರಾಜನೆಂಬ ಇನ್ನೂ ಒಂದು ಹೆಸರಿದ್ದಿತೆಂದು ಇದು ಸೂಚಿಸುತ್ತದೆಯೇ ?

## ಕೊಂಗಾಳ್ವರು

ಈ ಸಂಪುಟದ ಎರಡು ಶಾಸನಗಳು (ಕೃನ ೬೬–೬೭) ತ್ರಿಭುವನಮಲ್ಲಕೊಂಗಾಳ್ವನೆಂಬ ಹೆಸರಿನ ಅರಸರಿಗೆ ಸಂಬಂಧಿಸಿವೆ. ಎರಡೂ ವೀರಗಲ್ಲುಗಳೇ. ಮೊದಲನೆಯ ಶಾಸನದ ಕಾಲ ಕ್ರಿ.ಶ. ೧೦೭೯ ; ಎರಡನೆಯದು ೨೬ ವರ್ಷಗಳ ಬಳಿಕ, ಕ್ರಿ.ಶ. ೧೧೦೪–೦೫ರಲ್ಲಿ ಹುಟ್ಟಿದ ಶಾಸನ. ಸಲಿಗವೆ(ಸಾಲಿಗ್ರಾಮ)ಯನ್ನು ಚಂಗಾಳ್ವನು ಮುತ್ತಿದಾಗ ಅವನನ್ನು ವಿರೋಧಿಸಿ ಪ್ರಾಣವನ್ನು ಮುಡಿಪಿದ ವೀರರ ಸ್ಮಾರಕಗಳಿವು. ಕೊಂಗಾಳ್ವರ ವಂಶಾವಳಿಯನ್ನು ಪ್ರಸ್ತಾಪಿಸುತ್ತಾ ರಾಜೇಂದ್ರಪೃಥ್ವೀಕೊಂಗಾಳ್ವನು ಕ್ರಿ. ಶ. ೧೦೨೦, ೧೦೨೨ನೆಯ ವರ್ಷಗಳಲ್ಲಿ ಆಳುತ್ತಿದ್ದನೆಂದು ಹೇಳಿವೆ. ಪ್ರಸ್ತುತ ಕ್ರಿ ಶ. ೧೦೭೯ನೆಯ ವರ್ಷದ ಕೃನ ೬೬ನೆಯ ಶಾಸನದಲ್ಲಿ ಉಕ್ತನಾದ ತ್ರಿಭುವನಮಲ್ಲ ಕೊಂಗಾಳ್ವನು ಈತನೇ ಆಗಿರಬಹುದು. ರಾಜೇಂದ್ರಚೋಳಪೃಥ್ವೀ ಕೊಂಗಾಳ್ವನಿಗೆ ಆದಟರಾದಿತ್ಯ, ತ್ರಿಭುವನಮಲ್ಲಚೋಳಕೊಂಗಾಳ್ವ ಎಂಬ ಹೆಸರುಗಳೂ ಇದ್ದುವೆಂಬ ರೈಸ್‌ರವರ ಹೇಳಿಕೆಯನ್ನು ಇಲ್ಲಿ ನೆನೆಯಬಹುದು. ಬಹುಶಃ ಇದೇ ಅರಸನೇ ೧೧೦೪–೦೫ರವರೆಗೂ ಆಳುತ್ತಿದ್ದನೆಂದು ಭಾವಿಸಬಹುದು.[5] ಆದರೆ ಈ ಶಾಸನಗಳಲ್ಲಿ ಈತನನ್ನು ತ್ರಿಭುವನಮಲ್ಲ ಕೊಂಗಾಳ್ವನೆಂದೇ ಕರೆದಿದೆ. ಚೋಳ ಅರಸರು ತ್ರಿಭುವನಮಲ್ಲ ಎಂಬ ಬಿರುದನ್ನು ಪಡೆದಿರಲಿಲ್ಲ. ಆದರೆ ಕ್ರಿ.ಶ. ೧೦೭೬ರಲ್ಲಿ ಚಾಲುಕ್ಯ ಅರಸನೆಯ ವಿಕ್ರಮಾದಿತ್ಯನು ಆಳತೊಡಗಿದ್ದು ಆತನಿಗೆ ಈ ಬಿರುದಿದ್ದಿತು. ಕೊಂಗಾಳ್ವರು ತಮ್ಮ ನಿಷ್ಠೆಯನ್ನು ಬದಲಾಯಿಸಿಕೊಂಡರೆಂಬುದಕ್ಕೆ ಇದು ಸೂಚನೆಯಾಗಿರಬಹುದೇನೋ.

---

[1] ಎ ಕ., IV (1975) ಪಿಪ 14–15

[2] ಅದೇ, ಪಿಪ 12

[3] ಅದೇ, ಪೀಠಿಕೆ ಪು xcii–iii

[4] ಅದೇ, ಪು xciv

[5] ಎ ಕ., I (1972), ಪೀಠಿಕೆ ಪು xxxiii

## ಉಮ್ಮತ್ತೂರರಸರು

ಈ ಅರಸರ ಸುಮಾರು ೧೨ ಶಾಸನಗಳು ನಾಲ್ಕನೆಯ ಸಂಪುಟದಲ್ಲಿವೆ. ಪ್ರಕೃತ ಸಂಪುಟದಲ್ಲಿನ ಮತ್ತೆ ಮೂರು ಶಾಸನಗಳು ಅವರಿಗೆ ಸೇರಿವೆ. ಇವು ಪರಿಷ್ಕೃತ ಮೂರನೆಯ ಸಂಪುಟ (೧೯೭೪)[1]ದಲ್ಲಿ ಕೊಟ್ಟಿರುವ ಇವರ ವಂಶಾವಳಿಯ ಮೇಲೆ ಹೆಚ್ಚಿನ ಬೆಳಕನ್ನು ಚೆಲ್ಲುತ್ತವೆ. ನಾಲ್ಕನೆಯ ಸಂಪುಟದಲ್ಲಿನ ಕ್ರಿ. ಶ. ೧೪೬೭ರ ಚಾಸ ೬೦ನೆಯ ಶಾಸನದಲ್ಲಿ ಕಂಡುಬರುವ ವೀರಸೋಮೆಯರಾಯನು ಇಮ್ಮಡಿ ರಾಯಒಡೆಯನೆಂಬ ಹೆಸರನ್ನುಳ್ಳ ವೀರಸೋಮೆಯರಾಯನೇ ಇರಬೇಕು. ಆತನ ಮಗ ವೀರನಂಜರಾಯನ ಶಾಸನಗಳು ಇದೇ ವರ್ಷದಿಂದ ಆರಂಭವಾಗುವುದರಿಂದ ಈ ವರ್ಷವು ಸೋಮೆಯರಾಯನ ಕಡೆಯ ವರ್ಷವೆಂದು ನಾವು ಅಂಗೀಕರಿಸಬಹುದು. ಅದೇ ಸಂಪುಟದ ಮತ್ತೊಂದು ಶಾಸನವು (ಚಾಸ ೨೭೪) ಇಮ್ಮಡಿ ರಾಯಒಡೆಯನ ಮಗ ದೇಪಣ್ಣಒಡೆಯನಿಗೆ ಸೇರಿದುದು. ಅದರ ಕಾಲ ಕ್ರಿ. ಶ. ೧೪೪೮. ಪ್ರಕೃತ ಸಂಪುಟದ ತಂದ್ರಿಶಾಸನವು (ಕೃನ ೮೦) ಇದೇ ಅರಸನನ್ನು ಉಮ್ಮತ್ತೂರಿನ ಇಮ್ಮಡಿ ದೇಪಣ್ಣನೆಂದು ಸೂಚಿಸಿದೆ. ಇದರ ಕಾಲ ಕ್ರಿ.ಶ. ೧೪೬೭ ನಾಲ್ಕನೆಯ ಸಂಪುಟದ ಚಾಸ ೭೩೧ ಕ್ರಿ. ಶ. ೧೫೧೭ರ ಕಾಲದ್ದಿದ್ದು ದೇಪಣ್ಣಒಡೆಯನ ಮಗ ನಂಜರಾಯಒಡೆಯನದಾಗಿದೆ. ದೇಪಣ್ಣನ ಮಕ್ಕಳಾದ ಚಿಕ್ಕರಾಯ ಮತ್ತು ಗೋವಣ್ಣರಿಗಿಂತ ಇವನು ಬೇರೆಯಾಗಿರಬೇಕು. ಕ್ರಿ. ಶ. ೧೫೦೧ರ ಚಾಸ ೭೧ನೆಯ ಶಾಸನದ ವೀರಚನ್ನನಂಜರಾಯನು ಕ್ರಿ. ಶ. ೧೪೯೭ರಲ್ಲಿದ್ದ ಇದೇ ಹೆಸರಿನ ನಂಜರಾಯನ ಮಗನೇ ಆಗಿರಬೇಕು. ಆದರೆ ಕ್ರಿ. ಶ. ೧೫೧೧ರ ಚಾಸ ೩೦೦ ವೀರನಂಜರಾಯನ ಮಗ ಚಿಕ್ಕರಾಯನನ್ನು ಹೆಸರಿಸುತ್ತದೆ. ಆತನು ದೇಪಣ್ಣನ ಮಗ ಚಿಕ್ಕರಾಯನಿಂದ ಭಿನ್ನನೆಂಬುದು ಸ್ಪಷ್ಟ. ಬಹುಶಃ ಇವನು ಮೇಲೆ ತಿಳಿಸಿರುವ ನಂಜರಾಯನ ಮಗ ವೀರಚನ್ನನಂಜರಾಯನ ಸೋದರನಿರಬಹುದು. ಕ್ರಿ. ಶ. ೧೫೧೭ರ ಕೊಗಾ ೭ನೆಯ ಶಾಸನದಲ್ಲಿ ವೀರನಂಜರಾಯನ ಮಗ ಇಮ್ಮಡಿ ಚಿಕ್ಕರಾಯನೆಂದು ತಿಳಿಸಿರುವುದು ಈತನನ್ನೇ ಕುರಿತದ್ದು. ಇಲ್ಲಿ ಅವನನ್ನು ದೇಪಣ್ಣನ ಮಗ ಚಿಕ್ಕರಾಯನಿಂದ ಬೇರೆಯಾಗಿ ಗುರುತಿಸಲೆಂದೇ ಇಮ್ಮಡಿ ಎಂಬುದನ್ನು ಸೇರಿಸಿರಬೇಕು. ಈ ಮೇಲಿನ ಆಧಾರಗಳಿಂದ ಇಮ್ಮಡಿ ರಾಯಒಡೆಯನಿಂದೀಚಿನ ವಂಶಾವಳಿಯನ್ನು ಈ ರೀತಿ ತಿದ್ದಬಹುದು.

ಇಮ್ಮಡಿ ರಾಯಒಡೆಯ
(ಸೋಮರಾಯ)




ಕ್ರಿ. ಶ. ೧೫೩೦ರ ತಿನ ೨೪೯ನೆಯ ಶಾಸನವು ವೀರದೇವಣ್ಣಒಡೆಯನ ಆಳಿಕೆಗೆ ಸಂಬಂಧಿಸಿದುದು. ಅವನನ್ನು ಉಮ್ಮತ್ತೂರರಸನೆಂದು ತೆಗೆದುಕೊಂಡಿದ್ದೇವೆ. ಆದರೆ ಅದು ಸಂದೇಹಾಸ್ಪದ. ಇದೇ ಕಾಲದ ಬಸವಟ್ಟಿಗೆಯ ಶಾಸನದಲ್ಲಿ[2] ಉಮ್ಮತ್ತೂರರಸರ ಎಲ್ಲಾ ಬಿರುದುಗಳನ್ನೂ ಹೊಂದಿದ್ದ ವೀರಮಲ್ಲರಾಜಒಡೆಯನ ಹೆಸರಿದ್ದು ತಿನ ೨೪೯ರ ದೇವಣ್ಣ ಒಡೆಯನಿಗೆ ಯಾವ ಬಿರುದುಗಳೂ ಇಲ್ಲ.

ಈ ಸಂದರ್ಭದಲ್ಲಿ ಒಂದು ಕುತೂಹಲಕರವಾದ ವಿಷಯವನ್ನು ಗಮನಿಸಬೇಕು. ದುಗ್ಗಹಟ್ಟಿ ಶಾಸನವು[3] ಉಮ್ಮತ್ತೂರರಸನೆನಿಸಿದ ಮಹಾಮಂಡಲೇಶ್ವರ ಗಂಗರಾಜಒಡೆಯನ ತಾಯಿ ದೇವರಾಸಿಯಮ್ಮನು ಕೊಟ್ಟ ದತ್ತಿಯನ್ನು ತಿಳಿಸುತ್ತದೆ. ಇದರ ಕಾಲ ಕ್ರಿ.ಶ. ೧೫೧೧ ಜುಲೈ ೨೨; ವೀರನಂಜರಾಯನ ಮಗ ಚಿಕ್ಕರಾಯನಿಗೆ ಸೇರಿದ ಅದೇ ವರ್ಷದ ಜನವರಿ ೨೧ರ ಚಾಸ ೩೦೦ಕ್ಕಿಂತ ಆರು ತಿಂಗಳು ಈಚಿನದು. ಇದೇ ಅರಸನು ಕ್ರಿ.ಶ. ೧೫೧೨ರ ಮೇ ೩೧ರಂದು ಆಳುತ್ತಿದ್ದನೆಂದು ಮೇಲೆ ತೋರಿಸಿದೆ. ದುಗ್ಗಹಟ್ಟಿ ಶಾಸನದಿಂದ ಗಂಗರಾಜನಿಗೂ ಇತರರಿಗೂ ಇದ್ದ ಸಂಬಂಧ ವ್ಯಕ್ತವಾಗುವುದಿಲ್ಲ. ಅವನ ತಾಯಿಯು ದತ್ತಿ ಬಿಟ್ಟುದನ್ನು ಈ ಶಾಸನ ತಿಳಿಸಿರುವುದರಿಂದ ಅವನು ಆಳುತ್ತಿದ್ದನೇ ಎನ್ನುವುದನ್ನು ಸ್ಪಷ್ಟ

---

[1] ಪೀಠಿಕೆ ಪು. ೮೪

[2] ಎಕ., ಸಂಪುಟ III (1974), ನಂಗೂ ೩೩೮

[3] ಸಂಪುಟ IV (1975), ಯಳಂ ೧೨

ಪಡಿಸಲೂ ಸಾಧ್ಯವಿಲ್ಲ. ಗಂಗರಾಜನೆಂಬ ಉಮ್ಮತ್ತೂರರಸನನ್ನು ಕೃಷ್ಣದೇವರಾಯನು ಸೋಲಿಸಿ ಆ ಪ್ರಾಂತವನ್ನು ವಶಪಡಿಸಿಕೊಂಡು ತನ್ನ ಅಧಿಕಾರಿಯನ್ನು ನೇಮಿಸಿದನು. ಆ ಗಂಗರಾಜನು ಇಲ್ಲಿ ಚರ್ಚೆಗೊಳಗಾಗಿರುವವನೇ ಆಗಿದ್ದಲ್ಲಿ ಅವನ ನಂತರ ಚಿಕ್ಕರಾಯನು ಅರಸನಾದುದು ಹೇಗೆ? ಅಥವ ಕೃಷ್ಣದೇವರಾಯನು ಅವನ ಸ್ಥಾನದಲ್ಲಿ ಚಿಕ್ಕರಾಯನನ್ನು ನೇಮಿಸಿದನೆ? ಗಂಗರಾಜನು ಚಿಕ್ಕರಾಯನ ಅಧಿಕಾರವನ್ನು ಕಸಿದುಕೊಂಡಿದ್ದನೆ? ಈ ಪ್ರಶ್ನೆಗಳಿಗೆ ಸಮರ್ಪಕವಾದ ಉತ್ತರ ದೊರೆಯದು.

## ಸಾಮಾಜಿಕ-ಆರ್ಥಿಕ

ಗಂಗ ಶ್ರೀಪುರುಷನ ಶಾಸನದಲ್ಲಿ (ತಿನ ೨೫೩) ಪತ್ತೊಂದಿಯ ಪ್ರಸ್ತಾಪ ಬಂದಿದ್ದು ಇದು ದಸವಂಡಕ್ಕೆ ಸಮಾನವಾದ ಪದವೆಂಬುದನ್ನು ಈ ಮೊದಲೇ ಹೇಳಲಾಗಿದೆ. ಇಮ್ಮಡಿ ಶಿವಮಾರನ ವಿಜಯಪುರದ ಶಾಸನದಲ್ಲೂ (ತಿನ ೧೪೫) ಇದರ ಪ್ರಸ್ತಾಪ ಬಂದಿದೆ. ಇದೇ ಗ್ರಾಮದಲ್ಲಿರುವ ನೀತಿಮಾರ್ಗ ಎಱೆಗಂಗನ ಶಾಸನದಲ್ಲಿ (ತಿನ ೧೪೬) ಅರಸಣ್ಣನೆಂಬಾತ ಅಯ್ವೊನ್ದಿಯನ್ನು ತೆತ್ತನೆಂಬ ಮಾತು ಬಂದಿದೆ. ಪತ್ತೊಂದಿ ದಸವಸ್ಟಕ್ಕೆ ಸಮ ಎಂದಾಗ ಇದು ಐದನೆಯ ಒಂದುಭಾಗ (ಪಂಚವನ್ದ?)ಕ್ಕೆ ಸಂಬಂಧಿಸಿದ ಪದವೆಂದು ಊಹಿಸಬಹುದು.

ಕೃನ ೧೧೬ನೆಯ ತಮಿಳು ಶಾಸನವು ಸುಮಾರು ೧೧ನೆಯ ಶತಮಾನಕ್ಕೆ ಸೇರಿದ್ದು ತಮಿಳು ಗ್ರಂಥಾಕ್ಷರದಲ್ಲಿದೆ. ಇದರಲ್ಲಿ ೧೮ ಪಟ್ಟಣಗಳು, ೩೨ ವಳರ್ಪುರ(ಬೆಳೆಯುತ್ತಿರುವ ಪುರ)ಗಳು ಮತ್ತು ೬೪ ಘಟಿಕಾಸ್ಥಾನಗಳ (ಕಡಿಗೈತ್ತಾವಳಂ) ಉಲ್ಲೇಖವಿದೆ. ನಾವಿತ್ತಿರುವ ಶಾಸನಪಾಠದಂತೆ ೨೫೦೦ ವಿಷಯಕ್ಕೆ ಸೇರಿದ ತನ್ನೈಮಾನಗರ (ತಂಜಾವೂರು)ದ ವೀರಶಿಙ್ಗಕ್ಕನ್ನನ್ ಅಥವ ಗಂಗಮಂಡಲ ದೇಶಿಯಪ್ಪನು ಕೊಂಗವಿನಾಡು ಮತ್ತು ಪಂದಿನಾಡಿನಲ್ಲಿ ಭೂಮಿಯನ್ನು ದತ್ತಿ ಬಿಟ್ಟುದನ್ನು ತಿಳಿಸುತ್ತದೆ. ಆದರೆ ಶ್ರೀ ಕೆ. ಜಿ. ಕೃಷ್ಣನ್‌ರವರು ಶಾಸನವನ್ನು ಬೇರೆ ರೀತಿಯಾಗಿ ಓದಿದ್ದು ಅವರಂತೆ ಇಡತುಱೆ ಅಥವಾ ಎಱುಮುಱೆವೀರಪಟ್ಟಣದ ಉಭಯ ನಾನಾದೇಶಿಗಳು, ವೈಶ್ರವಣರು, ವೀರಕೊಡಿಗಳು ಮೊದಲಾದವರು ಆತನಿಗೆ ಏನನ್ನೋ ದತ್ತಿ ಬಿಡಲು ನಿರ್ಧರಿಸಿ ಅದಕ್ಕಾಗಿ ಕಲಿನಾಡಿನಲ್ಲಿ ಡಂಗುರ ಸಾರಿಸಿ (ತಾಱೆಕೊಟ್ಟ) ಸಭೆ ಸೇರಿಸಿದ್ದರು ಎಂಬ ಅರ್ಥ ನೀಡಿದ್ದಾರೆ.

ಕ್ರಿ.ಶ. ೧೧೩೫ನೆಯ ವರ್ಷದ ತಿನ ೬೯ರಲ್ಲಿ ೩ ಗದ್ಯಾಣವನ್ನು ಸಂಜಮಠದ ಅಗ್ಗಿಷ್ಟಿಕೆಗೂ ಮತ್ತೊಂದು ಗದ್ಯಾಣವನ್ನು ಮಠದ ಅಗ್ಗಿಷ್ಟಿಕೆಗೂ ಕೊಟ್ಟಂತೆ ತಿಳಿಸಿದೆ. ಇಲ್ಲಿ ತಿಳಿಸಿರುವ ಮಠಗಳೆರಡೂ ಬೇರೆ ಬೇರೆ ಎಂದು ತೋರುತ್ತದೆ. ಈ ಸಂದರ್ಭದಲ್ಲಿ ಚಿದಾನಂದಮೂರ್ತಿಯವರು ಅಗ್ಗಿಷ್ಟಿಕೆ ಎಂಬುದು ಬೆಂಕಿಯನ್ನು ಆರದಂತೆ ನೋಡಿಕೊಳ್ಳಲು ಮತ್ತು ಮನೆಮನೆಗೆ ವಿತರಣೆಮಾಡಲು ಗ್ರಾಮದ ಜನ ಮಾಡಿದ ಸಾಮೂಹಿಕ ಪ್ರಯತ್ನದ ಫಲ ಎಂದು ವಿವರಿಸಿರುವುದನ್ನು ಗಮನಿಸಬಹುದು. ಈ ವಿವರಣೆ ಅಷ್ಟೇನೂ ತರ್ಕಬದ್ಧವಲ್ಲ ಎನ್ನಿಸುತ್ತದೆ. ಹಾಗೆ ನೋಡಿದರೆ ಶಾಸನಗಳಲ್ಲಿ ಅಗ್ಗಿಷ್ಟಿಕೆಗಾಗಿ ಕೊಟ್ಟಿರುವ ದಾನಗಳು ಬ್ರಾಹ್ಮಣರು ತಮ್ಮ ಮನೆಗಳಲ್ಲಿ ಸಣ್ಣ ಇಷ್ಟಿ ಅಥವ ಹೋಮಗಳನ್ನು ಮಾಡಿಕೊಳ್ಳಲು ಕೊಟ್ಟಿರುವ ದಾನಗಳಿರಬಹುದೇ ಎಂಬ ಸಂದೇಹವನ್ನು ಅವರೇ ವ್ಯಕ್ತಪಡಿಸಿದ್ದಾರೆ. ಬಹುಶಃ. ಇದೇ ಸತ್ಯಕ್ಕೆ ಹತ್ತಿರದ್ದಾಗಿರಬಹುದು. ಅವರು ಉದಾಹರಿಸಿರುವ ಶಾಸನಗಳೂ ಸೇರಿದಂತೆ ಹಲವಾರು ಶಾಸನಗಳಲ್ಲಿ ಪ್ರತಿದಿನವೂ ಒಂದಲ್ಲ ಒಂದು ಯಾಗವನ್ನೋ ಹೋಮವನ್ನೋ ಆಚರಿಸುತ್ತಿದ್ದು ಅದಕ್ಕಾಗಿ ಅಗ್ನಿಯನ್ನು ಅನೂಚಾನವಾಗಿ ಉಳಿಸಿಕೊಂಡು ಬರಬೇಕಾಗಿದ್ದ ಮಠಗಳು ಅಥವಾ ಅಗ್ರಹಾರಗಳು ಅಗ್ಗಿಷ್ಟಿಕೆಯನ್ನು ನಡೆಯಿಸಿಕೊಂಡು ಬರುತ್ತಿದ್ದ ವಿಷಯವಿದೆ. ಹಲವುವೇಳೆ ಇದಕ್ಕೆ ದತ್ತಿ ಬಿಟ್ಟಿರುವವರು ಅಗ್ರಹಾರಗಳ ಮಹಾಜನರು.

ಹೊಯ್ಸಳ ಇಮ್ಮಡಿ ವೀರಬಲ್ಲಾಳನ ಆಳಿಕೆಯ ಕಾಲದ ಕ್ರಿ.ಶ. ೧೧೮೮ರ ತಿನ ೧೩ನೆಯ ಶಾಸನವು ಪೆರಿಯನಾಟ್ಟುಪ್ಪೆರುನ್ತೆರುನಗರವೆನಿಸಿದ ಆಲುಗೋಡು ಅಥವಾ ಕುಲೋತ್ತುಂಗಶೋಳಪುರದ ತುಲಗಾದಗಂಡ ಅಬ್ಬೆಯವಲ್ಲಭದೇವನೆಂದು ಕರೆಯಲಾದ ವಿಷ್ಣುದೇವಾಲಯ(ವಿಣ್ಣಗರ)ಕ್ಕೆ ಸಪ್ತಮಿ ಮತ್ತು ಅಮಾವಾಸ್ಯೆ ದಿನಗಳಂದು ಪರ್ವವನ್ನಾಚರಿಸಲು ಮಹಾಸಭೆಯಿಂದ ಭೂಮಿಯನ್ನು ಕೊಂಡು ದತ್ತಿ ಬಿಟ್ಟುದನ್ನು ತಿಳಿಸುತ್ತದೆ. ಚೋಳರ ಆಡಳಿತಕ್ರಮದಲ್ಲಿ ಅಧಿಕಾರಿಗಳನ್ನು ಪೆರುನ್ತನಂ ಮತ್ತು ಶಿರುನ್ತನಂ ಎಂದೂ ಅವುಗಳನ್ನು ಪುನಃ ಪೆರುನ್ತರಂ, ಶಿರುತರಂ ಎಂದೂ ಬೇರೆ ಬೇರೆ ಅಂತಸ್ತನ್ನು ಸೂಚಿಸುವ ಶ್ರೇಣಿಗಳಾಗಿ ವಿಂಗಡಿಸಿರುವುದು ಕಂಡುಬರುತ್ತದೆ. ಊರುಗಳನ್ನೂ ಹೀಗೆಯೇ ಹಲವು ಶ್ರೇಣಿಗಳನ್ನಾಗಿ ವಿಂಗಡಿಸಿದ್ದರೇನೋ ಎನ್ನಿಸುತ್ತದೆ. ಪೆರುಂತೆರುನಗರವು ಹೀಗೆ ಮೇಲ್ತರಗತಿಯ ಊರಾಗಿರಬಹುದು. ಆಲುಗೋಡು ಅಥವಾ ಕುಲೋತ್ತುಂಗಚೋಳಪುರವು ಪೆರಿಯನಾಡು ಎಂಬ ಪ್ರಾಂತದ ಮೇಲ್ತರಗತಿಯ ಊರಾಗಿದ್ದಿರ

ಬೇಕು. ಚೋಳರ ಕಾಲದ ಪ್ರಾಂತಗಳ ಹೆಸರುಗಳು ಹೊಯ್ಸಳರ ಕಾಲದಲ್ಲಿಯೂ ಉಳಿದುಬಂದಿರುವುದನ್ನು ಈ ಶಾಸನ ದಿಂದ ತಿಳಿಯಬಹುದು. ಕಾಲಕ್ರಮೇಣ ಈ ಹೆಸರುಗಳು ಬದಲಾವಣೆಯನ್ನು ಕಂಡಿವೆ.

ಬನ್ನೂರಿನ ಕೆಲವು ಶಾಸನಗಳು (ತಿನ ೫೪, ೬೨, ೬೪, ೬೭, ೬೯) ಆ ಊರಿನ ಹನುಮಂತೇಶ್ವರ, ಕೈಲಾಸೇಶ್ವರ ಮತ್ತು ಜನಾರ್ದನದೇವಾಲಯಗಳಿಗೆ ಹಲವು ಕೈಂಕರ್ಯಗಳಿಗಾಗಿ ನಗದು ಹಣವನ್ನು ದತ್ತಿಯಾಗಿ ಬಿಟ್ಟಿರುವುದನ್ನು ತಿಳಿಸುತ್ತವೆ. ಕ್ರಿ.ಶ. ೧೧೬೨-೬೩ರ ತಿನ ೫೪ನೆಯ ಶಾಸನದಂತೆ ಮೂಲಧನವಾಗಿ ೫ ಹಣವನ್ನಿಟ್ಟಿದ್ದು ಅದರ ವೃದ್ಧಿ (ಬಡ್ಡಿ)ಯಿಂದ ಸಂಜೆ ಸೊಡರನ್ನು ನಡೆಸಬೇಕಾಗಿತ್ತು. ಕ್ರಿ.ಶ. ೧೧೯೯ರ ತಿನ ೬೪ನೆಯ ಶಾಸನದಲ್ಲಿಯೂ ೩ ಗದ್ಯಾಣ ವನ್ನು ದತ್ತಿಕೊಟ್ಟಿದ್ದು ಅದರ ಬಡ್ಡಿ ಹೊನ್ನಿಗೆ ಹಾಗವೆಂದು ನಿಗದಿಪಡಿಸಿದೆ. ಇದನ್ನು ನಿತ್ಯಪಡಿಯ ಸೊಡರಿಗೆ ಉಪಯೋಗಿಸಲು ಬಿಟ್ಟಿದೆ. ಇದಕ್ಕಾಗಿ ದಾಸಿಯು ನಂದಾದೀಪವನ್ನೂ ತಾನೇ ಕೊಂಡು ದೇವಾಲಯದ ಸ್ಥಾನಿಕ ಗೋಣಿಯಜೀಯ ಪರದೇಸಿಯಪ್ಪನ ವಶಕ್ಕೆ ಕೊಟ್ಟಿದ್ದಾಳೆ. ಕ್ರಿ.ಶ. ೧೧೯೭ರ ತಿನ ೬೭ನೆಯ ಶಾಸನವು ತಮಿಳಿನಲ್ಲಿದ್ದು ಇಂಥದೇ ದತ್ತಿಯನ್ನು ತಿಳಿಸುತ್ತದೆ. ಇದರಲ್ಲಿ ೩ ಗದ್ಯಾಣವನ್ನು ದತ್ತಿಬಿಟ್ಟಿದೆ. ಕ್ರಿ.ಶ. ೧೧೩೫ರ ತಿನ ೬೯ ದತ್ತಿಬಿಟ್ಟ ೧೨ ಗದ್ಯಾಣಗಳಿಗೆ ತಿಂಗಳಿಗೆ ಹೊನ್ನಿಗೆ ಒಂದು ಹಾಗದಂತೆ ಬಡ್ಡಿಯಾಗುವುದೆಂದು ತಿಳಿಸುತ್ತದೆ. ಇದನ್ನು ಮೇಲೆ ತಿಳಿಸಿರುವ ತಿನ ೬೪ನೆಯ ಶಾಸನದೊಂದಿಗೆ ಹೋಲಿಸಬಹುದು. ಈ ಶಾಸನದಲ್ಲಿ ಬಡ್ಡಿಯದರ ಯಾವ ಕಾಲಕ್ಕೆ ಎಂಬುವನ್ನು ತಿಳಿಸಿಲ್ಲ. ಇಲ್ಲಿಯೂ ಸೂಚಿಸಿರುವ ಬಡ್ಡಿಯ ದರವು ಒಂದು ತಿಂಗಳಿಗೇ ಎಂದು ನಾವು ಊಹಿಸಬಹುದು. ಆದ್ದರಿಂದ ಹೊನ್ನಿಗೆ ವರ್ಷಕ್ಕೆ ಬಡ್ಡಿಯ ದರ ೧೨ ಹಾಗವಾಗುತ್ತದೆ.

ಮಿರ್ಲೆಯಲ್ಲಿರುವ ಸುಮಾರು ೧೫ನೆಯ ಶತಮಾನದ ಕೃನ ೯೨ನೆಯ ಶಾಸನದಲ್ಲಿ ಕುತೂಹಲಕರವಾದ ವ್ಯವಹಾರದ ಉಲ್ಲೇಖವಿದೆ. ಉದ್ಭವಸರ್ವಜ್ಞಪುರವಾದ ಹಂಪಾಪುರದ ಮಹಾಜನಗಳು ಮತ್ತು ಹಳ್ಳಿಹಿರಿಯೂರಿನ ಗೌಡುಪ್ರಜೆಗಳು ಹತ್ತೆಂಟು ಕಡೆ ಒಡೆದಿದ್ದ ಮೊದಲ ಕಾಲುವೆಯನ್ನು ಸರಿಪಡಿಸಲೂ, ತೆರಿಗೆ ಕೊಡಲೂ, ತಮಗೆ ಸಾಧ್ಯವಿಲ್ಲದುದನ್ನು ಮನಗಂಡು ಮನೆ, ಗದ್ದೆ, ಬೆದ್ದಲುಗಳನ್ನು ೧೪೦ ಹೊನ್ನಿಗೆ ಕ್ರಯದಾನವಾಗಿ ಶೃಂಗೇರಿಯ ನಾರಸಿಂಹಭಾರತಿವೊಡೆಯರ ಶಿಷ್ಯ ಭಾರತೀಪುರದ ಚಿಕ್ಕದೀಕ್ಷಿತರಿಗೆ ಕೊಟ್ಟರು. ಹಣವನ್ನು ಹಾಗ ಚಿನ್ನ ಉಳಿಯದಂತೆ ಸಾಕಲ್ಯವಾಗಿ ಪಡೆದುದಾಗಿ ಶಾಸನ ತಿಳಿಸುತ್ತದೆ. ಈ ಹಣವನ್ನು ಮಹಾಜನಗಳು ಕಟ್ಟಿ ಕಾಲುವೆಗಳ ಜೀರ್ಣೋದ್ಧಾರ ಕ್ಕಾಗಿ ಉಪಯೋಗಿಸಿದರು. ಮನೆಯನ್ನು ಛತ್ರವಾಗಿ ಪರಿವರ್ತಿಸಿ ಭೂಮಿಯಲ್ಲಿ ಬಂದ ಬೆಳೆಯಿಂದ ಬ್ರಾಹ್ಮಣ ಭೋಜನ ಮಾಡಿಸಲು ಬಳಸಲಾಯಿತು. ಸಾಲುಗಾವೆ (ಸಾಲಿಗ್ರಾಮ) ಮತ್ತು ಮಿರ್ಲೆಯ ಮಹಾಜನಗಳೂ ಮಬ್ಬಳೇಶ್ವರ ದೇವರ ಬೆಟ್ಟದ ಗಣಾಚಾರಿ ಚಾಮಯದೇವ ಮೊದಲಾದವರೂ ಈ ಧರ್ಮವು ತಪ್ಪದಂತೆ ನೋಡಿಕೊಳ್ಳಲು ಹೊಣೆಗಾರ ರಾಗಿರುವುದೊಂದು ವಿಶೇಷ. ಮಬ್ಬಳೇಶ್ವರದೇವರ ಬೆಟ್ಟವು ಮಬ್ಬಳೇಶ್ವರತೀರ್ಥ (ಮೈ ೧೩೫) ಎಂದರೆ ಚಾಮುಂಡಿ ಬೆಟ್ಟವಾಗಿರಬೇಕು.

ಸುಮಾರು ೧೬ನೆಯ ಶತಮಾನದ ಕೃನ.೧೨ನೆಯ ಶಾಸನವು ಗ್ರಾಮವೊಂದನ್ನು ಉಳಗುತ್ತಗೆಯಾಗಿ ಕೊಟ್ಟಂತೆ ತಿಳಿಸುತ್ತದೆ. ಇಲ್ಲಿ ಆ ಗ್ರಾಮದ ಭೂಮಿಯನ್ನು ಸಾಗುವಳಿ ಮಾಡಬೇಕೆಂಬ ಷರತ್ತಿನ ಮೇಲೆ ಗುತ್ತಿಗೆಗೆ ಕೊಟ್ಟಂತೆ ತೋರುತ್ತದೆ. ಎಂದರೆ ಆ ಗ್ರಾಮದ ಬಹುಭಾಗ ಬೀಳುಬಿದ್ದಿದ್ದಿರಬಹುದೆಂದು ಸೂಚಿತವಾಗುತ್ತದೆ.

ನನ್ನಿಗಹಳ್ಳಿಯ ಮೈ ೨೦೦ನೆಯ ಶಾಸನವು ೧೭ನೆಯ ಶತಮಾನದ ಲಿಪಿಯಲ್ಲಿದ್ದು ಹುರದ ಚಿನ್ನೊಡೆಯ, ಮಲ್ಲರಾಜೊಡೆಯರು ಆ ಗ್ರಾಮವನ್ನು ಸೂತ್ರಸುತಗೆಯಾಗಿ ಬಿಟ್ಟಂತೆ ತಿಳಿಸುತ್ತದೆ. ಸೂತ್ರಗುತ್ತಗೆ ಎಂಬುದಕ್ಕೆ ಬದಲಾಗಿ ಸೂತ್ರಸುತಗೆ ಎಂದು ಕೆತ್ತಿರಬಹುದು. ಗೊತ್ತಾದ ಅವಧಿಗೆ ಸರದಿಯ ಮೇಲೆ ಗುತ್ತಿಗೆಗೆ ಕೊಡುವ ಪದ್ಧತಿಯನ್ನು ಇದು ಸೂಚಿಸುವಂತೆ ತೋರುತ್ತದೆ. ಇದನ್ನು ಈ ಮೊದಲೇ ಗುರುತಿಸಲಾಗಿದೆ.[1] ಇಲ್ಲಿ ಹೆಚ್ಚು ಕುತೂಹಲಕರವಾದ ಅಂಶವೆಂದರೆ ಈ ಗ್ರಾಮಕ್ಕೆ ಗುತ್ತಿಗೆಯ ಹಣ ವಸೂಲು ಮಾಡುತ್ತಿದ್ದುದು ವರ್ಷಕ್ಕೆ ೨೦ ಗ ಮಾತ್ರವಾದರೆ ಮೇಲೆ ತಿಳಿಸಿರುವ ಸಂದರ್ಭದಲ್ಲಿ ಎರಡು ಉಪಗ್ರಾಮಗಳು ಸೇರಿದ ಒಂದು ಗ್ರಾಮಕ್ಕೆ ವರ್ಷಕ್ಕೆ ೪೦ ಗ ಗುತ್ತಗೆಯನ್ನು ಗೊತ್ತುಪಡಿಸಲಾಗಿದೆ. ಇಂಥ ಗುತ್ತಿಗೆಯನ್ನು ನವೀಕರಿಸಿರುವುದನ್ನು ಮೈ ೨೦೧ನೆಯ ಶಾಸನ ತಿಳಿಸುತ್ತದೆ. ಅದನ್ನು ಮರುಸೂತ್ರಿ ಎಂದು ಕರೆದಿದೆ.

[1] ಎ ಕ., III (1974) ಪೀಠಿಕೆ ಪು. ೯೦

ಪಡಿಸಲೂ ಸಾಧ್ಯವಿಲ್ಲ. ಗಂಗರಾಜನೆಂಬ ಉಮ್ಮತ್ತೂರರಸನನ್ನು ಕೃಷ್ಣದೇವರಾಯನು ಸೋಲಿಸಿ ಆ ಪ್ರಾಂತವನ್ನು ವಶಪಡಿಸಿಕೊಂಡು ತನ್ನ ಅಧಿಕಾರಿಯನ್ನು ನೇಮಿಸಿದನು. ಆ ಗಂಗರಾಜನು ಇಲ್ಲಿ ಚರ್ಚೆಗೊಳಗಾಗಿರುವವನೇ ಆಗಿದ್ದಲ್ಲಿ ಅವನ ನಂತರ ಚಿಕ್ಕರಾಯನು ಅರಸನಾದುದು ಹೇಗೆ? ಅಥವ ಕೃಷ್ಣದೇವರಾಯನು ಅವನ ಸ್ಥಾನದಲ್ಲಿ ಚಿಕ್ಕರಾಯನನ್ನು ನೇಮಿಸಿದನೆ? ಗಂಗರಾಜನು ಚಿಕ್ಕರಾಯನ ಅಧಿಕಾರವನ್ನು ಕಸಿದುಕೊಂಡಿದ್ದನೆ? ಈ ಪ್ರಶ್ನೆಗಳಿಗೆ ಸಮರ್ಪಕವಾದ ಉತ್ತರ ದೊರೆಯದು.

## ಸಾಮಾಜಿಕ-ಆರ್ಥಿಕ

ಗಂಗ ಶ್ರೀಪುರುಷನ ಶಾಸನದಲ್ಲಿ (ತಿನ ೨೫೩) ಪತ್ತೊಂದಿಯ ಪ್ರಸ್ತಾಪ ಬಂದಿದ್ದು ಇದು ದಸವಂದಕ್ಕೆ ಸಮಾನವಾದ ಪದವೆಂಬುದನ್ನು ಈ ಮೊದಲೇ ಹೇಳಲಾಗಿದೆ. ಇಮ್ಮಡಿ ಶಿವಮಾರನ ವಿಜಯಪುರದ ಶಾಸನದಲ್ಲೂ (ತಿನ ೧೪೫) ಇದರ ಪ್ರಸ್ತಾಪ ಬಂದಿದೆ. ಇದೇ ಗ್ರಾಮದಲ್ಲಿರುವ ನೀತಿಮಾರ್ಗ ಎಱೆಗಂಗನ ಶಾಸನದಲ್ಲಿ (ತಿನ ೧೪೬) ಅರಸಣ್ಣನೆಂಬಾತ ಆಯ್ಯೊನ್ದಿಯನ್ನು ತೆತ್ತನೆಂಬ ಮಾತು ಬಂದಿದೆ. ಪತ್ತೊಂದಿ ದಸವನ್ದಕ್ಕೆ ಸಮ ಎಂದಾಗ ಇದು ಐದನೆಯ ಒಂದುಭಾಗ (ಪಂಚವನ್ದ ?)ಕ್ಕೆ ಸಂಬಂಧಿಸಿದ ಪದವೆಂದು ಊಹಿಸಬಹುದು.

ಕೃನ ೧೧೬ನೆಯ ತಮಿಳು ಶಾಸನವು ಸುಮಾರು ೧೧ನೆಯ ಶತಮಾನಕ್ಕೆ ಸೇರಿದ್ದು ತಮಿಳು ಗ್ರಂಥಾಕ್ಷರದಲ್ಲಿದೆ. ಇದರಲ್ಲಿ ೧೮ ಪಟ್ಟಣಗಳು, ೩೨ ವಳರ್ಪುರ(ಬೆಳೆಯುತ್ತಿರುವ ಪುರ)ಗಳು ಮತ್ತು ೬೪ ಘಟಿಕಾಸ್ಥಾನಗಳ (ಕಡಿಗೈತ್ತಾವಳಂ) ಉಲ್ಲೇಖವಿದೆ. ನಾವಿತ್ತಿರುವ ಶಾಸನಪಾಠದಂತೆ ೨೫೦೦ ವಿಷಯಕ್ಕೆ ಸೇರಿದ ತನ್ಯೈಮಾನಗರ (ತಂಜಾವೂರು)ದ ವೀರಶಿಙ್ಗಕ್ಕುನ್ನನ್ ಅಥವ ಗಂಗಮಂಡಲ ದೇಶಿಯಪ್ಪನು ಕೊಂಗವಿನಾಡು ಮತ್ತು ಪಂದಿನಾಡಿನಲ್ಲಿ ಭೂಮಿಯನ್ನು ದತ್ತಿ ಬಿಟ್ಟುದನ್ನು ತಿಳಿಸುತ್ತದೆ. ಆದರೆ ಶ್ರೀ ಕೆ. ಜಿ. ಕೃಷ್ಣನ್‌ರವರು ಶಾಸನವನ್ನು ಬೇರೆ ರೀತಿಯಾಗಿ ಓದಿದ್ದು ಅವರಂತೆ ಇಡತುಱೈ ಅಥವಾ ಎಱಿಮುಱೈವೀರಪಟ್ಟಣದ ಉಭಯ ನಾನಾದೇಶಿಗಳು, ವೈಶ್ರವಣರು, ವೀರಕೊಡಿಗಳು ಮೊದಲಾದವರು ಆತನಿಗೆ ಏನನ್ನೋ ದತ್ತಿ ಬಿಡಲು ನಿರ್ಧರಿಸಿ ಅದಕ್ಕಾಗಿ ಕಲಿನಾಡಿನಲ್ಲಿ ಡಂಗುರ ಸಾರಿಸಿ (ತಾಱೈಕೊಟ್ಟ) ಸಭೆ ಸೇರಿಸಿದ್ದರು ಎಂಬ ಅರ್ಥ ನೀಡಿದ್ದಾರೆ.

ಕ್ರಿ.ಶ. ೧೧೩೫ನೆಯ ವರ್ಷದ ತಿನ ೬೯ರಲ್ಲಿ ೩ ಗದ್ಯಾಣವನ್ನು ಸಂಜಮಠದ ಅಗ್ಗಿಷ್ಟಿಕೆಗೂ ಮತ್ತೊಂದು ಗದ್ಯಾಣವನ್ನು ಮಠದ ಅಗ್ಗಿಷ್ಟಿಕೆಗೂ ಕೊಟ್ಟಂತೆ ತಿಳಿಸಿದೆ. ಇಲ್ಲಿ ತಿಳಿಸಿರುವ ಮಠಗಳೆರಡೂ ಬೇರೆ ಬೇರೆ ಎಂದು ತೋರುತ್ತದೆ. ಈ ಸಂದರ್ಭದಲ್ಲಿ ಚಿದಾನಂದಮೂರ್ತಿಯವರು ಅಗ್ಗಿಷ್ಟಿಕೆ ಎಂಬುದು ಬೆಂಕಿಯನ್ನು ಆರದಂತೆ ನೋಡಿಕೊಳ್ಳಲು ಮತ್ತು ಮನೆಮನೆಗೆ ವಿತರಣೆಮಾಡಲು ಗ್ರಾಮದ ಜನ ಮಾಡಿದ ಸಾಮೂಹಿಕ ಪ್ರಯತ್ನದ ಫಲ ಎಂದು ವಿವರಿಸಿರುವುದನ್ನು ಗಮನಿಸಬಹುದು. ಈ ವಿವರಣೆ ಅಷ್ಟೇನೂ ತರ್ಕಬದ್ಧವಲ್ಲ ಎನ್ನಿಸುತ್ತದೆ. ಹಾಗೆ ನೋಡಿದರೆ ಶಾಸನಗಳಲ್ಲಿ ಅಗ್ಗಿಷ್ಟಿಕೆಗಾಗಿ ಕೊಟ್ಟಿರುವ ದಾನಗಳು ಬ್ರಾಹ್ಮಣರು ತಮ್ಮ ಮನೆಗಳಲ್ಲಿ ಸಣ್ಣ ಇಷ್ಟಿ ಅಥವ ಹೋಮಗಳನ್ನು ಮಾಡಿಕೊಳ್ಳಲು ಕೊಟ್ಟಿರುವ ದಾನಗಳಿರಬಹುದೇ ಎಂಬ ಸಂದೇಹವನ್ನು ಅವರೇ ವ್ಯಕ್ತಪಡಿಸಿದ್ದಾರೆ. ಬಹುಶಃ ಇದೇ ಸತ್ಯಕ್ಕೆ ಹತ್ತಿರದ್ದಾಗಿರಬಹುದು. ಅವರು ಉದಾಹರಿಸಿರುವ ಶಾಸನಗಳೂ ಸೇರಿದಂತೆ ಹಲವಾರು ಶಾಸನಗಳಲ್ಲಿ ಪ್ರತಿದಿನವೂ ಒಂದಲ್ಲ ಒಂದು ಯಾಗವನ್ನೋ ಹೋಮವನ್ನೋ ಆಚರಿಸುತ್ತಿದ್ದು ಅದಕ್ಕಾಗಿ ಅಗ್ನಿಯನ್ನು ಅನೂಚಾನವಾಗಿ ಉಳಿಸಿಕೊಂಡು ಬರಬೇಕಾಗಿದ್ದ ಮಠಗಳು ಅಥವಾ ಅಗ್ರಹಾರಗಳು ಅಗ್ಗಿಷ್ಟಿಕೆಯನ್ನು ನಡೆಯಿಸಿಕೊಂಡು ಬರುತ್ತಿದ್ದ ವಿಷಯವಿದೆ. ಹಲವುವೇಳೆ ಇದಕ್ಕೆ ದತ್ತಿ ಬಿಟ್ಟಿರುವವರು ಅಗ್ರಹಾರಗಳ ಮಹಾಜನರು.

ಹೊಯ್ಸಳ ಇಮ್ಮಡಿ ವೀರಬಲ್ಲಾಳನ ಆಳಿಕೆಯ ಕಾಲದ ಕ್ರಿ.ಶ. ೧೧೮೮ರ ತಿನ ೧೩ನೆಯ ಶಾಸನವು ಪೆರಿಯನಾಟ್ಟುಪ್ಪೆರುನ್ತೆರುನಗರವೆನಿಸಿದ ಅಲುಗೋಡು ಅಥವಾ ಕುಲೋತ್ತುಂಗಶೋಳಪುರದ ತುಲಗಾದಗಂಡ ಅಬ್ಬೆಯವಲ್ಲಭದೇವನೆಂದು ಕರೆಯಲಾದ ವಿಷ್ಣುದೇವಾಲಯ(ವಿಣ್ಣಗರ)ಕ್ಕೆ ಸಪ್ತಮಿ ಮತ್ತು ಅಮಾವಾಸ್ಯೆ ದಿನಗಳಂದು ಪರ್ವವನ್ನಾಚರಿಸಲು ಮಹಾಸಭೆಯಿಂದ ಭೂಮಿಯನ್ನು ಕೊಂಡು ದತ್ತಿ ಬಿಟ್ಟುದನ್ನು ತಿಳಿಸುತ್ತದೆ. ಚೋಳರ ಆಡಳಿತಕ್ರಮದಲ್ಲಿ ಅಧಿಕಾರಿಗಳನ್ನು ಪೆರುನ್ತನಂ ಮತ್ತು ಶಿರುನ್ತನಂ ಎಂದೂ ಅವುಗಳನ್ನು ಪುನಃ ಪೆರುನ್ತರಂ, ಶಿರುತರಂ ಎಂದೂ ಬೇರೆ ಬೇರೆ ಅಂತಸ್ತನ್ನು ಸೂಚಿಸುವ ಶ್ರೇಣಿಗಳಾಗಿ ವಿಂಗಡಿಸಿರುವುದು ಕಂಡುಬರುತ್ತದೆ. ಊರುಗಳನ್ನೂ ಹೀಗೆಯೇ ಹಲವು ಶ್ರೇಣಿಗಳನ್ನಾಗಿ ವಿಂಗಡಿಸಿದ್ದರೇನೋ ಎನ್ನಿಸುತ್ತದೆ. ಪೆರುಂತೆರುನಗರವು ಹೀಗೆ ಮೇಲ್ತರಗತಿಯ ಊರಾಗಿರಬಹುದು. ಅಲುಗೋಡು ಅಥವಾ ಕುಲೋತ್ತುಂಗಚೋಳಪುರವು ಪೆರಿಯನಾಡು ಎಂಬ ಪ್ರಾಂತದ ಮೇಲ್ತರಗತಿಯ ಊರಾಗಿದ್ದಿರ

ಬೇಕು. ಚೋಳರ ಕಾಲದ ಪ್ರಾಂತಗಳ ಹೆಸರುಗಳು ಹೊಯ್ಸಳರ ಕಾಲದಲ್ಲಿಯೂ ಉಳಿದುಬಂದಿರುವುದನ್ನು ಈ ಶಾಸನದಿಂದ ತಿಳಿಯಬಹುದು. ಕಾಲಕ್ರಮೇಣ ಈ ಹೆಸರುಗಳು ಬದಲಾವಣೆಯನ್ನು ಕಂಡಿವೆ.

ಬನ್ನೂರಿನ ಕೆಲವು ಶಾಸನಗಳು (ತಿನ ೫೮, ೬೨, ೬೪, ೬೭, ೬೯) ಆ ಊರಿನ ಹನುಮಂತೇಶ್ವರ, ಕೈಲಾಸೇಶ್ವರ ಮತ್ತು ಜನಾರ್ದನದೇವಾಲಯಗಳಿಗೆ ಹಲವು ಕೈಂಕರ್ಯಗಳಿಗಾಗಿ ನಗದು ಹಣವನ್ನು ದತ್ತಿಯಾಗಿ ಬಿಟ್ಟಿರುವುದನ್ನು ತಿಳಿಸುತ್ತವೆ. ಕ್ರಿ.ಶ. ೧೧೬೨-೬೩ರ ತಿನ ೫೮ನೆಯ ಶಾಸನದಂತೆ ಮೂಲಧನವಾಗಿ ೫ ಹಣವನ್ನಿತ್ತಿದ್ದು ಅದರ ವೃದ್ಧಿ (ಬಡ್ಡಿ)ಯಿಂದ ಸಂಜೆ ಸೊಡರನ್ನು ನಡೆಸಬೇಕಾಗಿತ್ತು. ಕ್ರಿ.ಶ. ೧೧೯೯ರ ತಿನ ೬೪ನೆಯ ಶಾಸನದಲ್ಲಿಯೂ ೩ ಗದ್ಯಾಣವನ್ನು ದತ್ತಿಕೊಟ್ಟಿದ್ದು ಅದರ ಬಡ್ಡಿ ಹೊನ್ನಿಗೆ ಹಾಗವೆಂದು ನಿಗದಿಪಡಿಸಿದೆ. ಇದನ್ನು ನಿತ್ಯಪಡಿಯ ಸೊಡರಿಗೆ ಉಪಯೋಗಿಸಲು ಬಿಟ್ಟಿದೆ. ಇದಕ್ಕಾಗಿ ದಾಸಿಯು ನಂದಾದೀಪವನ್ನೂ ತಾನೇ ಕೊಂಡು ದೇವಾಲಯದ ಸ್ಥಾನಿಕ ಗೋಣಿಯಜೀಯ ಪರದೇಸಿಯಪ್ಪನ ವಶಕ್ಕೆ ಕೊಟ್ಟಿದ್ದಾಳೆ. ಕ್ರಿ.ಶ. ೧೧೯೨ರ ತಿನ ೬೭ನೆಯ ಶಾಸನವು ತಮಿಳಿನಲ್ಲಿದ್ದು ಇಂಥದೇ ದತ್ತಿಯನ್ನು ತಿಳಿಸುತ್ತದೆ. ಇದರಲ್ಲಿ ೩ ಗದ್ಯಾಣವನ್ನು ದತ್ತಿಬಿಟ್ಟಿದೆ. ಕ್ರಿ.ಶ. ೧೧೩೫ರ ತಿನ ೬೯ ದತ್ತಿಬಿಟ್ಟ ೧೨ ಗದ್ಯಾಣಗಳಿಗೆ ತಿಂಗಳಿಗೆ ಹೊನ್ನಿಗೆ ಒಂದು ಹಾಗದಂತೆ ಬಡ್ಡಿಯಾಗುವುದೆಂದು ತಿಳಿಸುತ್ತದೆ. ಇದನ್ನು ಮೇಲೆ ತಿಳಿಸಿರುವ ತಿನ ೬೪ನೆಯ ಶಾಸನದೊಂದಿಗೆ ಹೋಲಿಸಬಹುದು. ಈ ಶಾಸನದಲ್ಲಿ ಬಡ್ಡಿಯದರ ಯಾವ ಕಾಲಕ್ಕೆ ಎಂಬುದನ್ನು ತಿಳಿಸಿಲ್ಲ. ಇಲ್ಲಿಯೂ ಸೂಚಿಸಿರುವ ಬಡ್ಡಿಯ ದರವು ಒಂದು ತಿಂಗಳಿಗೇ ಎಂದು ನಾವು ಊಹಿಸಬಹುದು. ಆದ್ದರಿಂದ ಹೊನ್ನಿಗೆ ವರ್ಷಕ್ಕೆ ಬಡ್ಡಿಯ ದರ ೧೨ ಹಾಗವಾಗುತ್ತದೆ.

ಮಿರ್ಲೆಯಲ್ಲಿರುವ ಸುಮಾರು ೧೫ನೆಯ ಶತಮಾನದ ಕೃನ ೯೨ನೆಯ ಶಾಸನದಲ್ಲಿ ಕುತೂಹಲಕರವಾದ ವ್ಯವಹಾರದ ಉಲ್ಲೇಖವಿದೆ. ಉದ್ಭವಸರ್ವಜ್ಞಪುರವಾದ ಹಂಪಾಪುರದ ಮಹಾಜನಗಳು ಮತ್ತು ಹಳ್ಳಿಹಿರಿಯೂರಿನ ಗೌಡುಪ್ರಜೆಗಳು ಹತ್ತೆಂಟು ಕಡೆ ಒಡೆದಿದ್ದ ಮೊದಲ ಕಾಲುವೆಯನ್ನು ಸರಿಪಡಿಸಲೂ, ತೆರಿಗೆ ಕೊಡಲೂ, ತಮಗೆ ಸಾಧ್ಯವಿಲ್ಲದುದನ್ನು ಮನಗಂಡು ಮನೆ, ಗದ್ದೆ, ಬೆದ್ದಲುಗಳನ್ನು ೧೪೦ ಹೊನ್ನಿಗೆ ಕ್ರಯದಾನವಾಗಿ ಶೃಂಗೇರಿಯ ನಾರಸಿಂಹಭಾರತಿವೊಡೆಯರ ಶಿಷ್ಯ ಭಾರತೀಪುರದ ಚಿಕ್ಕದೀಕ್ಷಿತರಿಗೆ ಕೊಟ್ಟರು. ಹಣವನ್ನು ಹಾಗ ಚಿನ್ನ ಉಳಿಯದಂತೆ ಸಾಕಲ್ಯವಾಗಿ ಪಡೆದುದಾಗಿ ಶಾಸನ ತಿಳಿಸುತ್ತದೆ. ಈ ಹಣವನ್ನು ಮಹಾಜನಗಳು ಕಟ್ಟೆ ಕಾಲುವೆಗಳ ಜೀರ್ಣೋದ್ಧಾರಕ್ಕಾಗಿ ಉಪಯೋಗಿಸಿದರು. ಮನೆಯನ್ನು ಛತ್ರವಾಗಿ ಪರಿವರ್ತಿಸಿ ಭೂಮಿಯಲ್ಲಿ ಬಂದ ಬೆಳೆಯಿಂದ ಬ್ರಾಹ್ಮಣ ಭೋಜನ ಮಾಡಿಸಲು ಬಳಸಲಾಯಿತು. ಸಾಲುಗಾವೆ (ಸಾಲಿಗ್ರಾಮ) ಮತ್ತು ಮಿರ್ಲೆಯ ಮಹಾಜನಗಳೂ ಮಬ್ಬಳೇಶ್ವರ ದೇವರ ಬೆಟ್ಟದ ಗಣಾಚಾರಿ ಚಾಮಯದೇವ ಮೊದಲಾದವರೂ ಈ ಧರ್ಮವು ತಪ್ಪದಂತೆ ನೋಡಿಕೊಳ್ಳಲು ಹೊಣೆಗಾರರಾಗಿರುವುದೊಂದು ವಿಶೇಷ. ಮಬ್ಬಳೇಶ್ವರದೇವರ ಬೆಟ್ಟವು ಮಬ್ಬಳೇಶ್ವರತೀರ್ಥ (ಮೈ ೧೩೫) ಎಂದರೆ ಚಾಮುಂಡಿ ಬೆಟ್ಟವಾಗಿರಬೇಕು.

ಸುಮಾರು ೧೬ನೆಯ ಶತಮಾನದ ಕೃನ ೧೨ನೆಯ ಶಾಸನವು ಗ್ರಾಮವೊಂದನ್ನು ಉಳಗುತ್ತಗೆಯಾಗಿ ಕೊಟ್ಟಂತೆ ತಿಳಿಸುತ್ತದೆ. ಇಲ್ಲಿ ಆ ಗ್ರಾಮದ ಭೂಮಿಯನ್ನು ಸಾಗುವಳಿ ಮಾಡಬೇಕೆಂಬ ಷರತ್ತಿನ ಮೇಲೆ ಗುತ್ತಿಗೆಗೆ ಕೊಟ್ಟಂತೆ ತೋರುತ್ತದೆ. ಎಂದರೆ ಆ ಗ್ರಾಮದ ಬಹುಭಾಗ ಬೀಳುಬಿದ್ದಿದ್ದಿರಬಹುದೆಂದು ಸೂಚಿತವಾಗುತ್ತದೆ.

ನನ್ನಿಗಹಳ್ಳಿಯ ಮೈ ೨೦೦ನೆಯ ಶಾಸನವು ೧೬ನೆಯ ಶತಮಾನದ ಲಿಪಿಯಲ್ಲಿದ್ದು ಹುರದ ಚಿನ್ನೊಡೆಯ, ಮಲ್ಲರಾಜೊಡೆಯರು ಆ ಗ್ರಾಮವನ್ನು ಸೂತ್ರಸುತಗೆಯಾಗಿ ಬಿಟ್ಟಂತೆ ತಿಳಿಸುತ್ತದೆ. ಸೂತ್ರಗುತ್ತಗೆ ಎಂಬುದಕ್ಕೆ ಬದಲಾಗಿ ಸೂತ್ರಸುತಗೆ ಎಂದು ಕೆತ್ತಿರಬಹುದು. ಗೊತ್ತಾದ ಅವಧಿಗೆ ಸರದಿಯ ಮೇಲೆ ಗುತ್ತಿಗೆಗೆ ಕೊಡುವ ಪದ್ಧತಿಯನ್ನು ಇದು ಸೂಚಿಸುವಂತೆ ತೋರುತ್ತದೆ. ಇದನ್ನು ಈ ಮೊದಲೇ ಗುರುತಿಸಲಾಗಿದೆ.[1] ಇಲ್ಲಿ ಹೆಚ್ಚು ಕುತೂಹಲಕರವಾದ ಅಂಶವೆಂದರೆ ಈ ಗ್ರಾಮಕ್ಕೆ ಗುತ್ತಿಗೆಯ ಹಣ ವಸೂಲು ಮಾಡುತ್ತಿದ್ದುದು ವರ್ಷಕ್ಕೆ ೨೦ ಗ ಮಾತ್ರವಾದರೆ ಮೇಲೆ ತಿಳಿಸಿರುವ ಸಂದರ್ಭದಲ್ಲಿ ಎರಡು ಉಪಗ್ರಾಮಗಳು ಸೇರಿದ ಒಂದು ಗ್ರಾಮಕ್ಕೆ ವರ್ಷಕ್ಕೆ ೪೦ ಗ ಗುತ್ತಗೆಯನ್ನು ಗೊತ್ತುಪಡಿಸಲಾಗಿದೆ. ಇಂಥ ಗುತ್ತಿಗೆಯನ್ನು ನವೀಕರಿಸಿರುವುದನ್ನು ಮೈ ೨೦೧ನೆಯ ಶಾಸನ ತಿಳಿಸುತ್ತದೆ. ಅದನ್ನು ಮರುಸೂತ್ರ ಎಂದು ಕರೆದಿದೆ.

[1] ಎ ಕ., III (1974) ಪೀಠಿಕೆ ಪು. ೯೦

ಬನ್ನೂರಿನ ಕ್ರಿ. ಶ. ೧೧೯೨ರ ತಿನ ೬೭ನೆಯ ತ್ರುಟಿತ ಶಾಸನವು ಉಯ್ಯಕೊಂಡಪಿಳ್ಳೈಯ ಮಗ ಸಾಮವೇದಿ ಭಟ್ಟನ ಹೆಂಡತಿ ನಂಗೈಚ್ಚಾನಿಯು ಜನನಾಥಚತುರ್ವೇದಿಮಂಗಲದ ಕೈಲಾಸೇಶ್ವರಮುಡೈಯಾರ್ ದೇವಾಲಯಕ್ಕೆ ನಗದು ದತ್ತಿ ಬಿಟ್ಟುದನ್ನು ತಿಳಿಸುತ್ತದೆ. ಉಯ್ಯಕೊಂಡಪಿಳ್ಳೈಯನ್ನು ಮಧುರಾಂತಕಚತುರ್ವೇದಿಮಂಗಲದ ಆಲುಂಗಣತ್ತಾರ್ ಎಂದು ವರ್ಣಿಸಿದೆ. ಆಲುಂಗಣವೆಂದರೆ ಸಭೆಯ ಕಾರ್ಯನಿರ್ವಾಹಕಸಮಿತಿ ಮತ್ತು ಅವನು ಅಂಥ ಒಂದು ಸಮಿತಿಯ ಸದಸ್ಯನಾಗಿದ್ದನು.

ಕ್ರಿ. ಶ. ೧೬೮೦ರ ತಿನ ೮೧ ಮಲ್ಲಿಕಾರ್ಜುನದೇವರಿಗೆ ಅಭಿಷೇಕ, ನೈವೇದ್ಯ, ಅರ್ಘಣಿ, ದಂಡೆಗಳಿಗೆ ದತ್ತಿಬಿಟ್ಟುದನ್ನು ತಿಳಿಸುತ್ತದೆ. ಅರ್ಘಣಿಯು ದೇವರಿಗಾಗಿ ಉಪಯೋಗಿಸುವ ಶುದ್ಧವಾದ ನೀರು-ಅಗ್ಘವಣಿ. ಇದು ಅರ್ಘ್ಯಪಾನೀಯ ಎಂಬುದರ ತದ್ಭವ. ದಂಡೆ ಎಂಬುದು ಹೂವಿನಹಾರ ಎಂಬುದು ಸ್ಪಷ್ಟ.

ಸೋಸಲೆಯ ತಿನ ೧೨೦ನೆಯ ಶಾಸನವು ತೇದಿಯಿಲ್ಲದ ಸುಮಾರು ೮-೯ನೆಯ ಶತಮಾನಕ್ಕೆ ಸೇರಿದುದಾಗಿದ್ದು ವಡಕರೆನಾಡು-೩೦೦ನ್ನು ವಿಕ್ರಮಾದಿತ್ಯನು ಆಳುತ್ತಿದ್ದುದನ್ನು ಸೂಚಿಸುತ್ತದೆ. ಎಂ. ಎಚ್. ಕೃಷ್ಣ ಅವರು ಈತನನ್ನು ವರುಣದ ಗೊಗ್ಗಿ ಮೊದಲಾದವರು ಸೇರಿದ್ದ ಚಾಲುಕ್ಯವಂಶದವನಿರಬಹುದೆಂದು ಸೂಚಿಸಿದ್ದಾರೆ. ಬೇರೆ ಆಧಾರಗಳಿಲ್ಲದಿರುವಾಗ ಕೇವಲ ಹೆಸರಿನಿಂದ ಮಾತ್ರ ಏನನ್ನಾದರೂ ಸೂಚಿಸುವುದು ಕಷ್ಟ. ಎಂ. ಎಚ್. ಕೃಷ್ಣ ಅವರು ಶಾಸನವನ್ನು ಬೇರೆಯಾಗಿಯೇ ಅರ್ಥಮಾಡಿಕೊಂಡಿದ್ದಾರೆ. ಅವರು ಈ ಅರಸನು ಸುಗ್ಗಿಯ ಕಾಲದಲ್ಲಿ ಅಲ್ಲಿಗೆ ಬಂದು (ವನ್ನು) ಧರ್ಮಕ್ಕಾಗಿ ಹಣವನ್ನಿತ್ತನೆಂದು ಭಾವಿಸುತ್ತಾರೆ. ಆದರೆ ನಮ್ಮ ಅರ್ಥವಿವರಣೆಯೇ ಬೇರೆ. 'ಸುಗ್ಗಿಯುಳ್ವಂದು ಪೊನ್ನಿಟ್ಟ ಧರ್ಮ' ಎನ್ನುವುದನ್ನು ಅರಮನೆಗೆ ಬರಬೇಕಾಗಿದ್ದ ಭಟಮಾನ್ಯದಲ್ಲಿ ಸುಗ್ಗಿಯಲ್ಲಿ ಒಂದು ಹೊನ್ನಿನಂತೆ ಧರ್ಮಕ್ಕೆ ವಿನಿಯೋಗಿಸಿದನೆಂದು ಅರ್ಥೈಸಿದ್ದೇವೆ.

ತಿನ ೧೮೮ನೆಯ ತಮಿಳು ಶಾಸನವು ಪಂಚಮಠಸ್ಥಾನದ ಸ್ಥಾನಪತಿಗಳು ಭೂಮಿಯನ್ನು ಮತ್ತು ಚಂಡಿಱೈ ಮತ್ತು ಪುರವುಗಳಿಂದ ಬರುವ ಆದಾಯವನ್ನು ದತ್ತಿಬಿಟ್ಟುದನ್ನು ತಿಳಿಸುತ್ತದೆ. ಪುರವು ಎಂದರೆ ಭೂಕಂದಾಯ. ಚಂಡಿಱೈ ಎಂಬುದರ ಅರ್ಥ ಸ್ಪಷ್ಟವಾಗಿಲ್ಲ. ದತ್ತಿಕೊಟ್ಟ ಭೂಮಿಯು ತೆರಿಗೆ ಮತ್ತು ಚಂಡಿಱೈಗಳಿಂದ ವಿನಾಯಿಸಿದ್ದು ಅವುಗಳನ್ನೂ ದತ್ತಿಬಿಟ್ಟಂತೆ ತೋರುತ್ತದೆ. ಈ ದತ್ತಿಯನ್ನು ದೇವಾಲಯದಲ್ಲಿ ತಿರುವೋಣಂ ಹಬ್ಬವನ್ನಾಚರಿಸುವುದಕ್ಕಾಗಿ ಬಿಟ್ಟಿದೆ. ಶ್ರವಣ ನಕ್ಷತ್ರದ ತಮಿಳು ರೂಪ ತಿರುವೋಣಂ. ಆದ್ದರಿಂದ ಶ್ರವಣ ನಕ್ಷತ್ರವಿದ್ದ ದಿನದಂದು ಆ ಹಬ್ಬವನ್ನಾಚರಿಸುತ್ತಿದ್ದರೆಂದು ತೋರುತ್ತದೆ.

ತಿನ ೨೪೨ ಸುಮಾರು ೧೪ನೆಯ ಶತಮಾನಕ್ಕೆ ಸೇರಿದ ತಮಿಳು ಶಾಸನ. ಇದು ಮಾಯಿಲಂಗೈನ ನಗರತ್ತಾರರು ನಗದು ದತ್ತಿ ಬಿಟ್ಟುದನ್ನು ಜನನಾಥಪುರದ ಸುದ್ದಮಲ್ಲೀಶ್ವರಮುಡೈಯಾರ್ ದೇವಾಲಯದ ದೇವಕರ್ಮಿಗಳಾಗಿದ್ದ ದೇವಾಂಡಾನ್ ಮತ್ತು ಅವನ ತಮ್ಮ ಉಡೈಯಪಿಳ್ಳೈ ಇವರು ಆ ದತ್ತಿಯನ್ನು ಪಡೆದುದನ್ನು ತಿಳಿಸುತ್ತದೆ. ದೇವಾಂಡನನ್ನು ನಡುವಿರುಕ್ಕೈನಂಬಿ ಎಂದು ಕರೆದಿದೆ. ನಡುವಿರುಕ್ಕೈ ಎಂಬುದು ಸಂಪರ್ಕಾಧಿಕಾರಿ ಎಂಬರ್ಥದಲ್ಲಿದ್ದು ಪ್ರಕೃತ ಸಂದರ್ಭದಲ್ಲಿ ದೇವಸ್ಥಾನಕ್ಕೆ ಸಂಬಂಧಿಸಿದಂತೆ ಆತನು ಇಂಥ ಅಧಿಕಾರಿಯಾಗಿದ್ದನೆಂದು ನಾವು ಭಾವಿಸಬಹುದು.

ತಿನ ೨೪೬ ಒಂದು ಕುತೂಹಲಕರವಾದ ಶಾಸನ. ಹಸುಗಳನ್ನು ಹೊಡೆದುಕೊಂಡು ಹೋಗುತ್ತಿದ್ದ ಸಂಗಣ್ಣನಿಗೆ ಹಳ್ಳಿಹಿರಿಯೂರಿನ ಪ್ರಜೆ ಗೌಡುಗಳು ೮೦ ಗದ್ಯಾಣಗಳನ್ನು ತೆತ್ತು ಹಸುಗಳನ್ನು ಬಿಡಿಸಿಕೊಂಡುದನ್ನು ತಿಳಿಸುತ್ತದೆ. ಅವರಲ್ಲಿ ತಕ್ಕಷ್ಟು ದ್ರವ್ಯವಿಲ್ಲದಿದ್ದುದರಿಂದ ಮಲ್ಲೆಯ ಮಾರಗೌಡನಿಂದ ಆ ಹಣವನ್ನು ಎರವಲು ತಂದುದಾಗಿ ಶಾಸನ ತಿಳಿಸುತ್ತದೆ. ಆದರೆ ಕೆಲಕಾಲದವರೆಗೂ ಅದನ್ನು ಹಿಂದಿರುಗಿಸಿರಲಿಲ್ಲ. ಆದ್ದರಿಂದ ಅದಕ್ಕೆ ಬದಲಾಗಿ ಮಾಯಿಲಂಗೈ ಅಥವ ಶ್ರೀರಂಗಪುರದ ಮಹಾಜನರು ಮಾರಗೌಡನ ಮಗ ಚಂದ್ರಪ್ಪನಿಗೆ ೪೦೦೦೦ ಕಂಬ (?) ಭೂಮಿಯನ್ನು ಕೊಟ್ಟರೆಂದು ಹೇಳಿದೆ.

ಮಹೂಗೂರಿನ ಸುಮಾರು ೧೬ನೆಯ ಶತಮಾನದ ತಿನ ೨೬೦ನೆಯ ಶಾಸನವು ಹಂಪೆಯಣ್ಣನಿಗೆ ಬಂದಿದ್ದ ಉಡಿಸೆಯಮಾಡಿ ಎಂಬ ವ್ಯಾಧಿಯು ವಾಸಿಯಾಗಲೆಂದು ಆತನ ತಮ್ಮ ಶಿವನಪ್ಪನು ದೇಸಿನಾಥದೇವರಿಗೆ ದೀಪಮಾಲೆ ಕಂಭವನ್ನು ಮಾಡಿಸಿಕೊಟ್ಟುದನ್ನು ತಿಳಿಸುತ್ತದೆ. ಉಡಿ ಎಂದರೆ ಒಂದು ಬಗೆಯ ರೋಗ-ಕಂಕುಳಶಂಖ.[1] ಉಡಿಸೆಯ ಮಾಡಿ ಎಂಬುದು ಬಹುಶಃ ಈ ರೋಗಕ್ಕೆ ಸ್ಥಳೀಯ ಹೆಸರಿರಬಹುದು.

---

[1] ಕಿಟ್ಟೆಲರ ಕನ್ನಡ-ಇಂಗ್ಲಿಷ್ ನಿಘಂಟು (ಪರಿಷ್ಕೃತ), ಸಂ. II, ಪು. ೨೨೪

ತಿನ ೧೫ ಒಂದು ತಾಮ್ರಶಾಸನ. ಆರವೀಡು ಮನೆತನದ ರಾಮದೇವ ಮಹಾರಾಯನು ಆಳುತ್ತಿದ್ದಾಗ ಮೈಸೂರಿನ ಚಾಮರಾಜಒಡೆಯನು ಬ್ರಾಹ್ಮಣರಿಗೆ ವೃತ್ತಿಗಳನ್ನು ನೀಡಿರುವುದನ್ನು ತಿಳಿಸುವ ಕ್ರಿ.ಶ. ೧೬೧೩ನೆಯ ವರ್ಷದ ಈ ಶಾಸನದಲ್ಲಿ ಉಮ್ಮತ್ತೂರು, ಶ್ರೀರಂಗಪಟ್ಟಣಗಳನ್ನು ಹಿಂದೆ ವೆಂಕಟಪತಿದೇವರಾಯನು ತಮ್ಮ ಪಿತಾಮಹನಾದ ರಾಜಒಡೆಯನಿಗೆ ಕಾಣಾಂಚಿಯಾಗಿ ಪಾಲಿಸಿದನೆಂದು ಹೇಳಿದೆ. ಈ ಪದವನ್ನು ಕುರಿತು ನಾನು ಈಗಾಗಲೇ ಪ್ರಸ್ತಾಪಿಸಿದ್ದೇನೆ.[1] ಈ ಪದಕ್ಕೆ ವಂಶಪಾರಂಪರ್ಯವಾಗಿ ಅನುಭವಿಸಬಹುದಾದ ಯಾಜಮಾನ್ಯ (ಹಕ್ಕುದಾರಿಕೆ ಜಮೀನು ಅಥವಾ ಪಿತ್ರಾರ್ಜಿತ ಆಸ್ತಿ)[2] ಎಂಬ ಅರ್ಥವಿದೆ. ಬಹುಶಃ ತಮಿಳಿನ ಕಾಣಿಯಾಟ್ಚಿ ಎಂಬ ಪದದಿಂದ ಬಂದಂತೆ ತೋರುತ್ತದೆ. ರಾಜಒಡೆಯನಿಗೆ ವೆಂಕಟಪತಿದೇವರಾಯನು ಆ ಎರಡು ಪ್ರದೇಶಗಳನ್ನು ವಂಶಪಾರಂಪರ್ಯವಾಗಿ ಅನುಭವಿಸಲು ಬಿಟ್ಟು ಕೊಟ್ಟನೆಂದು ಇದರಿಂದ ತಿಳಿಯಬರುತ್ತದೆ.

## ಅನಿರ್ದಿಷ್ಟ ವಿಷಯಗಳು

ಕೃನ ೨೦–೨೪ ಚಿಕ್ಕಹನಸೋಗೆಯ ಬಸದಿಯಲ್ಲಿರುವ ಶಾಸನಗಳು. ಈ ಬಸದಿಯನ್ನು ಕೃನ ೨೨ರಲ್ಲಿ ಅಜ್ಜಿಯ ಬಸದಿ ಎಂದು ಕರೆದಿದೆ. ಇದನ್ನು ರಾಜೇಂದ್ರಚೋಳ ಅಥವ ವೀರರಾಜೇಂದ್ರ ನನ್ನಿಚಂಗಾಳ್ವನು ಸುಮಾರು ೧೧ನೆಯ ಶತಮಾನದಲ್ಲಿ ಕಟ್ಟಿಸಿದನೆಂದು ಹೇಳಲಾಗಿದೆ (ಕೃನ ೨೦–೨೧). ಆದರೆ ಆ ಬಸದಿಯು ಮೊದಲೇ ಇದ್ದುದಾಗಿಯೂ ಚಂಗಾಳ್ವನು ಅದನ್ನು ಪುನರ್ನವ ಮಾಡಿಸಿದನೆಂದೂ ಕೃನ ೨೫–೨೯ ಮುಂತಾದುವುಗಳಿಂದ ತಿಳಿದುಬರುತ್ತದೆ. ಕೊಂಡಕುಂದಾನ್ವಯ, ದೇಸಿಯಗಣ ಮತ್ತು ಪುಸ್ತಕಗಚ್ಛದ ದಾಮನಂದಿಭಟ್ಟನು ಪನಸೋಗೆಯ ಚಂಗಾಳ್ವತೀರ್ಥದ ಎಲ್ಲ ಬಸದಿಗಳು, ಅಜ್ಜಿಯ ಬಸದಿ ಮತ್ತು ತೊಳಕಿನಾಡಿನ ಬೆಳವನೆಯ ಬಸದಿಗಳೂ ಸೇರಿದಂತೆ ಬಸದಿಗಳ ಸಮುದಾಯಕ್ಕೆ ಮುಖ್ಯನಾಗಿದ್ದನು. ಕೃನ ೨೩ನೆಯ ಶಾಸನವು ದಿವಾಕರನಂದಿಸಿದ್ಧಾಂತದೇವರ ಗುರುಪರಂಪರೆಯನ್ನು ಕೊಡುತ್ತದೆ. ಇಲ್ಲಿ ಅವನು ಚಂದ್ರಕೀರ್ತಿಯ ಶಿಷ್ಯನೆಂದಿದೆ. ಆದರೆ ಕೃನ ೨೪ರಲ್ಲಿ ದಾಮನಂದಿದೇವರು ಈತನ ಜ್ಯೇಷ್ಠಗುರು ಎಂದಿದೆ. ಕೃನ ೩೩ನೆಯ ಶಾಸನದಲ್ಲಿ ಇದು ಸ್ಪಷ್ಟಗೊಳ್ಳುತ್ತದೆ. ಅಲ್ಲಿ ದಾಮನಂದಿಯೂ ಚಂದ್ರಕೀರ್ತಿಯೂ ಸಧರ್ಮರಾಗಿದ್ದು ಏಳಾಚಾರ್ಯನ ಶಿಷ್ಯರೆಂದು ಹೇಳಿದೆ. ಏಳಾಚಾರ್ಯನು ಕೃನ ೨೩ರ ಮಲಧಾರಿದೇವ. ಕೃನ ೩೩ರಲ್ಲಿ ಗುರುಪರಂಪರೆಯನ್ನು ಏಳಾಚಾರ್ಯನ ಗುರು ಶ್ರೀಧರದೇವನಿಂದಾರಂಭಿಸಿದರೆ ಕೃನ ೨೩ರಲ್ಲಿ ಹನಸೋಗೆಯ ನಿವಾಸಿ ದಾಮಣಂದಿಯು ಶ್ರೀಧರಾಚಾರ್ಯನ ಗುರುವೆಂದಿರುವುದರಿಂದ ಇಲ್ಲಿ ಇನ್ನೊಂದು ತಲೆಮಾರು ಹಿಂದಿನಿಂದ ಈ ವಂಶಾವಳಿ ಆರಂಭವಾದಂತಾಯಿತು. ಕೃನ ೩೩ನೆಯ ಶಾಸನವು ಮತ್ತೊಂದು ಬಗೆಯಲ್ಲಿಯೂ ಕುತೂಹಲಕರವಾದುದು. ಅದು ದಿವಾಕರನಂದಿಯ ಶಿಷ್ಯ ಜಯಕೀರ್ತಿದೇವನನ್ನು ಚಾಂದ್ರಾಯಣದೇವನೆಂದೂ ಕರೆದಿದೆ. ಈ ಉಪನಾಮವನ್ನು ವಿವರಿಸಲೋ ಎಂಬಂತೆ ಕೃನ ೨೫ನೆಯ ಶಾಸನವು ಜಯಕೀರ್ತಿಯು ಉಪವಾಸ, ವಿಧಿ, ಅನೇಕ ವಾರ ಚಾಂದ್ರಾಯಣಗಳನ್ನಾಚರಿಸಿ ಪ್ರಸಿದ್ಧನಾಗಿದ್ದನೆನ್ನುತ್ತದೆ.

ಈ ಸಂದರ್ಭದಲ್ಲಿ ಛಂದೋನುಶಾಸನದ ಕರ್ತೃವಾದ ಜಯಕೀರ್ತಿಯೇ ಈ ಜಯಕೀರ್ತಿ ಎಂದು ಹೇಳಿರುವುದನ್ನು ಗಮನಿಸಬಹುದು.[3] ಛಂದೋನುಶಾಸನದ ಕರ್ತೃವಿನ ಕಾಲ ಸಮರ್ಪಕವಾಗಿ ನಿರ್ಧಾರವಾಗಿಲ್ಲ. ದೇವಭದ್ರಮುನಿಯು ರಚಿಸಿದ ಕ್ರಿ.ಶ. ೧೧೬೧ರ ಹೆಗ್ಗೆರೆ ಶಾಸನದಲ್ಲಿ[4] ಚಿತ್ರಲತೆ ಎಂದು ಹೆಸರಿಸಿರುವ ಚಂಪಕಮಾಲಾವೃತ್ತವನ್ನು ಬಳಸಿದೆ. ಈ ಚಿತ್ರಲತೆ ಎಂಬ ಹೆಸರನ್ನು ಜಯಕೀರ್ತಿಯು ಮಾತ್ರ ಉಪಯೋಗಿಸಿದ್ದಾನೆ. ಆದ್ದರಿಂದ ಶಾಸನಕವಿಗೆ ಜಯಕೀರ್ತಿಯ ಗ್ರಂಥದ ಪರಿಚಯವಿದ್ದಿರಬೇಕು, ಈ ಕಾರಣದಿಂದ ಜಯಕೀರ್ತಿಯು ಕ್ರಿ.ಶ. ೧೧೬೧ ಕ್ಕಿಂತ ಮುಂಚೆ ಜೀವಿಸಿದ್ದಿರಬೇಕೆಂಬ ವಾದವನ್ನು ಒಪ್ಪಬಹುದು.

ಆದರೆ ಈ ಹೆಗ್ಗೆರೆ ಶಾಸನದಲ್ಲಿಯೂ ಇದರಂತೆ ತಂಡಗ ಮತ್ತು ಕರಡಾಳು ಶಾಸನಗಳಲ್ಲಿಯೂ[5] ಜೈನಗುರುವಾಗಿ

---

[1] B. R. Gopal (Ed), *Karnatak Inscriptions*, V, *Introduction* p. xxx–xxxi

[2] ಕಿಟ್ಟೆಲರ ಕನ್ನಡ-ಇಂಗ್ಲಿಷ್ ನಿಘಂಟು (ಪರಿಷ್ಕೃತ), II, ಪು. ೪೨೭

[3] ಮಾನವಿಕ ಕರ್ನಾಟಕ ಸಂ. ೩ ಸಂಚಿಕೆ ೩, ಪು ೨೯

[4] ಎ ಕ., XII, ಚಿಕ್ಕನಾಯಕನಹಳ್ಳಿ ೨೧

[5] ಅದೇ, ಚಿಕ್ಕನಾಯಕನಹಳ್ಳಿ ೧೮ ಮತ್ತು ತಿಪಟೂರು ೯೪

ಕಂಡುಬರುವ ಚಾಂದ್ರಾಯಣದೇವನೇ ಚಿಕ್ಕಹನಸೋಗೆಯ ಶಾಸನಗಳ (ಕೃನ ೨೫ ಮತ್ತು ೩೩) ಚಾಂದ್ರಾಯಣಾಪರ ನಾಮಧೇಯನಾದ ಜಯಕೀರ್ತಿಯೆಂದು ಹೇಳಲಾಗಿದೆ. ಇದು ಮಾತ್ರ ಅನುಮಾನಾಸ್ಪದ. ಚಾಂದ್ರಾಯಣದೇವ ಎಂಬುದು ಸ್ಪಷ್ಟವಾಗಿ ಜಯಕೀರ್ತಿಯ ಉಪನಾಮ; ಚಾಂದ್ರಾಯಣ ವ್ರತವನ್ನಾಚರಿಸಿದ್ದರಿಂದ ಅವನು ಧರಿಸಿದ (ಅಥವಾ ಆತನಿಗೆ ಕೊಡಲಾದ) ಬಿರುದು. ತುಮಕೂರು ಜಿಲ್ಲೆಯ ಯಾವ ಶಾಸನದಲ್ಲಿಯೂ ಚಾಂದ್ರಾಯಣದೇವನನ್ನು ಜಯಕೀರ್ತಿ ಎಂದು ಹೆಸರಿಸಿಲ್ಲ. ಚಾಂದ್ರಾಯಣ ಎಂಬ ಹೆಸರಿನ ಸಾಮ್ಯದಮೇಲೆ ಮಾತ್ರ ಈ ಇಬ್ಬರೂ ಒಬ್ಬನೇ ಎಂದು ಹೇಳಿರುವುದು.

ಮತ್ತೊಂದು ವಿಷಯವನ್ನು ಇಲ್ಲಿ ಗಮನಿಸಬೇಕು. ಚಿತ್ರೂರುಘಡದ ಕ್ರಿ.ಶ. ೧೧೪೯ರ ಶಾಸನವು ಜಯಕೀರ್ತಿಯ ಶಿಷ್ಯ ರಾಮಕೀರ್ತಿಯನ್ನು ಹೆಸರಿಸುತ್ತದೆ. ಇಲ್ಲಿನ ಜಯಕೀರ್ತಿಯನ್ನು ಹನಸೋಗೆಯ ಶಾಸನದ ಜಯಕೀರ್ತಿಯೆಂದು ಗುರುತಿಸಲಾಗಿದೆ. ಕೃನ ೨೪ರಲ್ಲಿರುವ 'ಮುನ್ನಿನಂತೆ ಕಾದನಾ ರಾಮರದತ್ತಿಯ ತಾಮ್ರಶಾಸನಪಡಿಯ' ಎಂಬುದನ್ನು ರೈಸ್ ಅವರು '..... ರಾಮಠದತ್ತಿಯ' ಎಂದು ಮೊದಲು ಓದಿದರೂ ಅದರ ಸರಿಯಾದ ಪಾಠ 'ರಾಮರದತ್ತಿಯ' ಎಂದು ತಿದ್ದಿಕೊಂಡಿದ್ದಾರೆ. ನಿಜವಾಗಿಯೂ ಇದು ಹೀಗೆಯೇ ಇರಬೇಕು. ಇದರಲ್ಲಿಯೂ ಕೃನ ೨೫, ೨೯ ಮತ್ತು ೩೩ನೆಯ ಶಾಸನಗಳಲ್ಲಿಯೂ ಪ್ರಸಿದ್ಧವಾದ ಇಕ್ಷ್ವಾಕುವಂಶದ ರಾಮನು ಹನಸೋಗೆಯ ಬಸದಿಯನ್ನು ಕಟ್ಟಿಸಿ ದತ್ತಿ ಬಿಟ್ಟನೆಂಬ ಐತಿಹ್ಯವಿದೆ. ಈ ದತ್ತಿಯನ್ನು ಶಕ, ನಳ, ವಿಕ್ರಮಾದಿತ್ಯ ಮತ್ತು ಗಂಗ ಮಾರಸಿಂಹರು ನಡೆಸಿಕೊಂಡು ಬಂದರೆಂದೂ ಹೇಳಿದೆ. ಆದ್ದರಿಂದ ಬಸದಿಯು ರಾಮರ ದತ್ತಿ. ಶಾಸನದ ಮೂಲವನ್ನು ನಾವು ಪರೀಕ್ಷಿಸಿದಾಗ ರಾಮರ ಎಂಬಲ್ಲಿಯ 'ರ', 'ಠ'ದಂತೆ ಕಾಣುವ ಸಂಭವವುಂಟು. ಆದರೆ ಅದು ಕಲ್ಲಿನಲ್ಲಾದ ಮುಕ್ಕು ಎಂದು ಪರಿಗಣಿಸಬಹುದು. ಅಥವಾ ಅದನ್ನು ಠ ಎಂದೇ ಓದಬಹುದಾದರೂ ಅದನ್ನು ಸರಿಪಡಿಸಿಕೊಂಡು ರೈಸ್ ತಿದ್ದಿಕೊಂಡಿರುವಂತೆ ಇಂಥವೇ ಆದ ಇತರ ಶಾಸನಗಳಲ್ಲಿರುವಂತೆ ಇಲ್ಲಿಯೂ 'ರ' ಎಂದೇ ಓದಬೇಕು.

ಶಾಸನದ ಆ ಭಾಗವನ್ನು 'ಮುನ್ನಿನಂತೆ ಕಾದನಾರಾಮಠದತ್ತಿಯ' ಎಂದು ಓದಿ ಅಲ್ಲಿ ಆರಾಮಠದ ಪ್ರಸ್ತಾಪವಿದೆ; ಕನ್ನಡ ಸಾಹಿತ್ಯದ ಹಸ್ತಪ್ರತಿ ದೊರೆತ ದೇವಕುಮಾರ ಜೈನಪ್ರಾಚ್ಯಪುಸ್ತಕಭಂಡಾರವಿರುವ ಬಿಹಾರದ ಆರಾದಲ್ಲಿ ಈ ಮಠ ಇತ್ತು ಎಂಬುದು, ಒಂದೇ ಮಾತಿನಲ್ಲಿ ಹೇಳುವುದಾದರೆ, ಯಾದೃಚ್ಛಿಕವಾದ ಊಹೆ. ಆ ಭಂಡಾರ ಅಸ್ತಿತ್ವಕ್ಕೆ ಬಂದುದೇ ೧೯೦೮ರ ಆಸುಪಾಸಿನಲ್ಲಿ. ಅನಂತರ ದೇವಕುಮಾರಜೈನರ ಉದಾರಕೊಡುಗೆಯಿಂದ ಆ ಗ್ರಂಥಭಂಡಾರಕ್ಕೆ ಅನೇಕ ಹಸ್ತಪ್ರತಿಗಳನ್ನು ಉತ್ತರ ಮತ್ತು ದಕ್ಷಿಣ ಭಾರತದಲ್ಲೆಲ್ಲಾ ತೀವ್ರವಾಗಿ ಶೋಧಿಸಿ ಸಂಗ್ರಹಿಸಲಾಯಿತು. ಹಲವು ಗ್ರಂಥಗಳನ್ನು ಕೊಂಡುಕೊಳ್ಳಲಾಯಿತು.

ಕೃನ ೩೬ನೆಯ ಶಾಸನವು ಏಲಾಚಾರ್ಯನು ಸಮಾಧಿಮರಣ ಹೊಂದಿದುದನ್ನು ತಿಳಿಸುತ್ತದೆ. ಆತನ ಪರೋಕ್ಷ ವಿನಯಕ್ಕೆ ಕಲ್ನೆಲೆಯದೇವನು ನಿಸಿಧಿಗೆಯನ್ನು ನಿಲ್ಲಿಸಿದನು. ಎಚಿಯನ ಆಡಳಿತವನ್ನು ಸೂಚಿಸುವ ಈ ಶಾಸನವು ಎರಡು ಬಗೆಯ ತೀರ್ಥಗಳಲ್ಲಿ ಗೊಮ್ಮಟನು ಸ್ಥಾವರ ತೀರ್ಥನೆಂದೂ, ಕಲ್ನೆಲೆದೇವನು ಜಂಗಮತೀರ್ಥನೆಂದೂ ವರ್ಣಿಸುತ್ತದೆ. ಇಲ್ಲಿ ಎಚಿಯನು ಗಂಗರಾಜ ಎಚಿಗನೆಂದೂ ಆದ್ದರಿಂದ ಅವನ ಕಾಲಕ್ಕಿಂತ ಮುಂಚೆಯೇ, ಎಂದರೆ ೧೦ನೆಯ ಶತಮಾನದ ಮೊದಲ ಪಾದದಲ್ಲಿ, ಚಾವುಂಡರಾಯನ ಕಾಲಕ್ಕೂ ಮೊದಲೇ, ಗೊಮ್ಮಟ ಅಥವಾ ಬಾಹುಬಲಿಯ ಪ್ರತಿಷ್ಠೆ ಆಗಿರಬೇಕೆಂದು ಶ್ರೀಕಂಠಶಾಸ್ತ್ರಿಗಳು ವಾದಿಸಿದ್ದಾರೆ. ಆದರೆ ಅಲ್ಲಿ ಹೆಸರಿಸಿರುವ ಎಚಿಯನನ್ನು ಆ ಹೆಸರಿನ ಯಾವ ಗಂಗರಾಜನೊಂದಿಗೂ ಗುರುತಿಸಲಾಗದು. ಶಾಸನದ ಲಿಪಿ ೧೦ನೆಯ ಶತಮಾನದ ಕಡೆಯ ಭಾಗಕ್ಕೆ ಸೇರಿದುದು. ಶಾಸನದ ಹೇಳಿಕೆಯಿಂದ ಹೆಚ್ಚೆಂದರೆ ಆಗ ನೇರ ನಿಲುವಿನ ಗೊಮ್ಮಟಮೂರ್ತಿಯ ಕಲ್ಪನೆ ಆ ಕಾಲಕ್ಕೆ ಪ್ರಚಲಿತವಾಗಿತ್ತು ಎನ್ನಬಹುದು. ಆ ಕಾಲಕ್ಕೆ ಶ್ರವಣಬೆಳಗೊಳದ ಬಾಹುಬಲಿಮೂರ್ತಿಯ ಪ್ರತಿಷ್ಠೆ ಆಗಿದ್ದಿರಬಹುದು.

ಇದೇ ಸಂದರ್ಭದಲ್ಲಿ ತಿನ ೩೧೨ನೆಯ ಆಲ್ಗೋಡು ಶಾಸನವನ್ನೂ ಇಲ್ಲಿ ಪ್ರಾಸಂಗಿಕವಾಗಿ ಪ್ರಸ್ತಾಪಿಸಬಹುದು. ೧೦ನೆಯ ಶತಮಾನದ ಈ ಶಾಸನದಲ್ಲಿ ಚಾವುಣ್ಡನ ವಂಶಾವಳಿಯನ್ನು ಕೊಟ್ಟಿದೆ. ಈತ ಮಾಬಳಯ್ಯನ ಮಗ, ಗೋವಿಂದಮಯ್ಯನ ಮೊಮ್ಮಗ, ಈಶ್ವರಯ್ಯ ಈತನ ಚಿಕ್ಕಪ್ಪ. ತಂದೆ ಹಾಗೂ ಚಿಕ್ಕಪ್ಪಂದಿರು ನೊಳಂಬಕುಳಾನ್ತಕದೇವನ ಅಧೀನಾಧಿಕಾರಿಗಳೆಂದು ಶಾಸನದಲ್ಲಿ ಹೇಳಿದೆ. ಅನೇಕಗುಣರತ್ನರಾಶಿ, ಮನುಮುನಿಚರಿತ, ವಿನಯವಿಭೂಷಣನೆಂದೆಲ್ಲಾ ವರ್ಣಿಸಲಾದ ಈತನು ಚಾಮುಂಡರಾಯಪುರಾಣದ ಕರ್ತೃವೂ, ಮಾರಸಿಂಹನ ಮಂತ್ರಿಯೂ ಆದ ಚಾಮುಂಡರಾಯನಾಗಿರಬಹುದೆಂದು ಊಹಿಸಲಾಗಿದೆ.[1] ಈತನ ತಂದೆಯ ಬಗೆಗೆ ನಮಗೆ ಬೇರಾವ ಆಧಾರಗಳಿಂದಲೂ ಏನೂ ತಿಳಿದಿಲ್ಲ. ಹೆಚ್ಚಿನ

---

[1] ಟಿ. ವಿ. ವೆಂಕಟಾಚಲಶಾಸ್ತ್ರೀ: ಚಾಮುಂಡರಾಯ (1973) ಪು. ೫-೬

ಆಧಾರಗಳಿಲ್ಲದಿದ್ದರೂ, ಈ ಊಹೆ ಒಪ್ಪಿಗೆಯಾದಲ್ಲಿ ಚಾಮುಂಡರಾಯನ ತಂದೆ ಮಾಬಳಯ್ಯನೆಂದು ತಿಳಿದಂತಾಗುತ್ತದೆ. ದುರದೃಷ್ಟವಶಾತ್ ಶಾಸನ ಪೂರ್ಣವಾಗಿಲ್ಲ. ಅಲ್ಲಿ ಈತನು ಅನೇಕ ಧರ್ಮಕಾರ್ಯಗಳನ್ನೆಸಗಿದ ಪ್ರಸ್ತಾಪವಿದೆ. ಬಹುಶಃ ಇವು ನಾರಸಿಂಹನ ಮಂತ್ರಿಯಾದ ಚಾಮುಂಡರಾಯನಿಗೇ ಒಪ್ಪುವ ಮಾತುಗಳೇನೋ?

ಮೈ ೧೧೦ ಒಂದು ನಿಷಿಧಿ ಶಾಸನ. ಜೈನಗುರು ವರ್ಧಮಾನನು ಸನ್ಯಸನವಿಧಿಯಿಂದ ಮುಡಿಪಿದುದನ್ನು ತಿಳಿಸುತ್ತದೆ. ಈ ಗುರುವು ಹೊಯ್ಸಳ ಕಾರ್ಯಾಲಯದಲ್ಲಿ (ಆಡಳಿತದಲ್ಲಿ) ಅಗ್ರಗಣ್ಯನಾಗಿದ್ದನೆನ್ನುತ್ತದೆ ಶಾಸನ. ಅವನು ಯಾವ ಅಧಿಕಾರ ಹೊಂದಿದ್ದ ಎಂಬುದು ಸ್ಪಷ್ಟವಿಲ್ಲ. ರಾಜನು ಯಾರು ಎಂಬುದೂ ನಮಗೆ ತಿಳಿಯದು.

ಸಾಲಿಗ್ರಾಮದಲ್ಲಿರುವ ಕ್ರಿ. ಶ ೧೮೭೮ರ ಕ್ರಮ ೫೮ನೆಯ ಶಾಸನವು ಹುಜೂರು ಪೋತೀಖಾನೆಯ ವೀರಪ್ಪ ಮತ್ತು ಅವನ ತಮ್ಮ ತಿಮ್ಮಪ್ಪ ಇವರಿಬ್ಬರೂ ನೂತನವಾದ ಚೈತ್ಯಾಲಯವೊಂದನ್ನು ಕಟ್ಟಿಸಿದುದನ್ನು ತಿಳಿಸುತ್ತದೆ. ಆದರೆ ಆ ಬಸದಿಯಲ್ಲಿಟ್ಟಿರುವ ಚತುರ್ವಿಂಶತಿತೀರ್ಥಂಕರರ ಮೂರ್ತಿಯ ಪ್ರಭಾವಳಿಯ ಹಿಂದೆ ಕಂಡರಿಸಲಾದ ೧೨ನೆಯ ಶತಮಾನದ ಲಿಪಿಯಲ್ಲಿರುವ ಕ್ರಮ ೫೯ನೆಯ ಶಾಸನ ಮತ್ತು ಅದೇ ಸ್ಥಳದ ಅನಂತತೀರ್ಥಂಕರನ ಮೂರ್ತಿಯ ಪೀಠದ ಮೇಲೆ ಹೊಸದಾಗಿ ದೊರೆತ ಅದೇ ಕಾಲದ ಲಿಪಿಯ ಕ್ರಮ ೬೩ನೆಯ ಶಾಸನಗಳಿಂದ ಅಲ್ಲಿ ೧೨ನೆಯ ಶತಮಾನದಲ್ಲಿಯೇ ಒಂದು ಬಸದಿ ಇದ್ದಿರಬಹುದೆಂದು ಹೇಳಬಹುದು ಅಥವಾ ಹೊಸದಾಗಿ ಕಟ್ಟಿಸಿದ ಈ ಬಸದಿಯಲ್ಲಿ ಬೇರೆಡೆಯಿಂದ ೧೨ನೆಯ ಶತಮಾನದ ಮೂರ್ತಿಗಳನ್ನು ತಂದಿಟ್ಟಿರಲೂಬಹುದು.

ಮೈ ೪ ಮತ್ತು ೫ನೆಯ ಶಾಸನಗಳು ಸುಬ್ಬರಾಯದಾಸನೆಂಬ ಪ್ರತಿನಾಮಧೇಯವುಳ್ಳ ಗೋಪಾಲದಾಸನು ಮಾಡಿದ ಧರ್ಮವನ್ನು ತಿಳಿಸುತ್ತವೆ. ಈತನು ನಡೆಸಿದ ಹಲವು ಪವಾಡಗಳು, ಈತನಿಗೆ ದೊರೆತ ಹಲವು ಬಿರುದುಬಾವಲಿಗಳ ವಿವರಣೆ ಇಲ್ಲಿದೆ. ಬಿಳಿಕೆರೆಯ ಶಾಸನ[1]ದಿಂದ ಅಲ್ಲಿ ಜಯವೆಂಕಟೇಶದೇವರ ದೇವಾಲಯವನ್ನೂ ಛತ್ರವನ್ನೂ ನಿರ್ಮಿಸಿದುದು ನಮಗೆ ತಿಳಿದಿದೆ. ಆ ಶಾಸನದ ಕಾಲ ಕ್ರಿ.ಶ. ೧೮೪೩. ಮೈಸೂರಿನಲ್ಲಿರುವ ಅದೇ ಕಾಲದ ಶಾಸನ (ಮೈ ೫)ದಲ್ಲಿ ಸುಬ್ಬರಾಯದಾಸನಿಗೆ ಬಿಳಿಕೆರೆ ಅನ್ನಛತ್ರ ನಡೆಸಲು ೩೬೮೦ ಕಂಠೀರಾಯಿವರಹ ನಗದಾಗಿ ಕೊಡುವಂತೆ ಮುಮ್ಮಡಿ ಕೃಷ್ಣರಾಜವೊಡೆಯನು ಅಪ್ಪಣೆಮಾಡಿರುವ ವಿಷಯವೂ ಸೇರಿದೆ.

ಕ್ರಿ.ಶ. ೧೬೬೭ರ ಮೈ ೧೦೪ ಧನ್ನೋಜಿಯು ಹೊಸಕೋಟೆ ಗ್ರಾಮವನ್ನು ಧನ್ನೋಜಿರಾಮಭಾಯಮ್ಮಪುರವೆಂಬ ಅಗ್ರಹಾರವನ್ನಾಗಿ ಮಾಡಿ ದತ್ತಿಬಿಟ್ಟುದನ್ನು ತಿಳಿಸುವ ತಾಮ್ರಶಾಸನ. ದಾನಿಯು ರತ್ನಪಡಿವ್ಯಾಪಾರ ಮಾಡುತ್ತಿದ್ದ ಬ್ರಾಹ್ಮಣ; ಗುರ್ಜರದೇಶ ಎಂದರೆ ಗುಜರಾತಿನಿಂದ ಬಂದವನು. ಮೊದಲು ಚಾಮರಾಜನೊಡನೆ ವ್ಯವಹಾರವನ್ನಿಟ್ಟುಕೊಂಡಿದ್ದ ಈತನು ರಾಜನಿಗೆ ಒಂದು ಜೊತೆ ಕರ್ಣಾಭರಣವನ್ನಿತ್ತು ಹಲವು ಪಾರಿತೋಷಕಗಳನ್ನು ಪಡೆದನು. ಶಾಸನದ ಕಾಲದಲ್ಲಿ ದೇವರಾಜವೊಡೆಯನ ಆಶ್ರಿತನಾಗಿದ್ದನು. ತುಲಾಭಾರವೇ ಮೊದಲಾದ ಹಲವು ಮಹಾದಾನಗಳನ್ನು ಮಾಡಿದ್ದ ಈತನು ತನ್ನ ಪತ್ನಿ ರಾಮಭಾಯಮ್ಮನ ಇಚ್ಛೆಯಂತೆ, ರಾಜನ ಅಪ್ಪಣೆ ಪಡೆದು, ಅಗ್ರಹಾರ ನಿರ್ಮಿಸಿ ದತ್ತಿ ಕೊಟ್ಟಿದ್ದಾನೆ. ದಾನಿಯು ಧನ್ನೋಜಿಯೇ ಆದರೂ ದಾನಶಾಸನಕ್ಕೆ ರಾಜನ ಹಸ್ತಾಕ್ಷರವಿರುವುದು ಗಮನಾರ್ಹ.

ಕ್ರಿ.ಶ. ೧೬೨೭ರ ಮೈ ೧೩೭ನೆಯ ಶಾಸನದಿಂದ ಚಾಮುಂಡಿಬೆಟ್ಟದ ಮೇಲಿನ ಮಹಾಬಲೇಶ್ವರದೇವಾಲಯದ ಮುಂದಿನ ಮಂಟಪದ ಕಂಬವೊಂದನ್ನು ದೇವಾಲಯದ ಪಾತ್ರದ ಮಾಯಿದೇವಿಯ ಮಗಳು ನಾಗಸಂಭು ಮಾಡಿಸಿದಂತೆ ತಿಳಿದುಬರುತ್ತದೆ. ಕಂಬದ ಬೆಲೆ ೩೦ಗದ್ಯಾಣ. ಅಲ್ಲಿಯೇ ಇರುವ ಮತ್ತೊಂದು ಕಂಬದ ಬೆಲೆ ೩ ಗದ್ಯಾಣ ಮಾತ್ರ.

## ಛಂದಸ್ಸು[2]

ಈ ಶಾಸನಸಂಪುಟದಲ್ಲಿ ಸಂಗ್ರಹಿತವಾಗಿರುವ ಪ್ರತಿಶಾಸನದಲ್ಲೂ–ಅದು ಪದ್ಯಶಾಸನವಾಗಿರಲಿ ಅಥವಾ ಪದ್ಯಗದ್ಯಗಳು ಕೂಡಿರುವ ಶಾಸನವಾಗಿರಲಿ–ಕಂಡುಬರುವ ಪದ್ಯಗಳ ಛಂದಸ್ಸುಗಳನ್ನು ಗುರುತಿಸಿ ಆಯಾ ಶಾಸನದ ಅಡಿಟಿಪ್ಪಣಿಯಲ್ಲಿ ತೋರಿಸಿದೆ. ಕನ್ನಡ ನಾಡಿನ ಶಾಸನ ಕವಿತ್ವದಲ್ಲಿ ಛಂದಸ್ಸು ವಹಿಸಿರುವ ಪಾತ್ರ ಯಾವ ರೀತಿಯದು, ಅಲ್ಲಿ ಯಾವ ಪ್ರಮಾಣದಲ್ಲಿ ಹೇಗೆ ಛಂದಸ್ಸುಗಳು ಹಂಚಿಕೆಯಾಗಿವೆ, ಅಂತಹ ಹಂಚಿಕೆಯಲ್ಲಿ ಕಂಡುಬರುವ ಕವಿಗಳ ವಿದ್ವತ್ತಿನ ದೃಷ್ಟಿ ಯಾವ ತೆರನಾದ್ದು ಈ ಮುಂತಾದುವನ್ನು ತಿಳಿಯುವುದಾದರೆ ಶಾಸನಗಳ ಸಾಹಿತ್ಯಿಕ ಮೌಲ್ಯವನ್ನು ಗುರುತಿಸುವ ಕೆಲಸ

---

[1] ಎ ಕ., IV (1975) ಪು. ೨೧

[2] ಪೀಠಿಕೆಯ ಈ ಭಾಗವನ್ನು ಡಾ॥ ಟಿ. ವಿ. ವೆಂಕಟಾಚಲಶಾಸ್ತ್ರಿಗಳು ಬರೆದಿದ್ದಾರೆ.

ಸ್ವಲ್ಪಮಟ್ಟಿಗೆ ಸುಲಭವಾಗುತ್ತದೆ ಎನ್ನುವುದೇ ಇದರ ಉದ್ದೇಶ. ಅಲ್ಲದೆ ಕನ್ನಡಭಾಷೆಯ ರಚನೆಯ ಮೇಲೆ ಸಂಸ್ಕೃತ ಭಾಷೆ ಛಂದಸ್ಸುಗಳು ಉಂಟುಮಾಡಿರುವ ಪ್ರಭಾವವನ್ನು ಕನ್ನಡ ಛಂದಸ್ಸುಗಳ–ಎರವಲು ಕೊಂಡ ಮತ್ತು ದೇಶೀಯವಾದ–ಐತಿಹಾಸಿಕ ಬೆಳವಣಿಗೆಯ ಮಜಲುಗಳನ್ನು ಗುರುತಿಸುವುದಕ್ಕೆ ಕೂಡ ಇದರಿಂದ ತುಂಬ ಅನುಕೂಲವಾಗುತ್ತದೆ.

ಸಂಸ್ಕೃತ ಕನ್ನಡ ಶಾಸನಗಳ ಛಂದೋವೈವಿಧ್ಯವನ್ನು ಸ್ವತಂತ್ರವಾಗಿಯೂ ತೌಲನಿಕವಾಗಿಯೂ ಅಧ್ಯಯನ ಮಾಡುವುದು ಫಲಕಾರಿಯಾದ್ದೇ. ವಾಸ್ತವವಾಗಿ ಸಂಸ್ಕೃತ ಕನ್ನಡ ಭಾಷೆಗಳಲ್ಲಿ ಶಾಸನಛಂದಸ್ಸಿನ ಅಧ್ಯಯನವಿರಲಿ, ಛಂದಸ್ಸಿನ ವ್ಯಾಪಕವಾದ ಅಧ್ಯಯನವೇ ಇನ್ನೂ ನಡೆದಿಲ್ಲ. ಭಾವವಾಹಿಯಾದ ಭಾಷೆ ನಿಯತಛಂದಸ್ಸಿನ ಚೌಕಟ್ಟಿನಲ್ಲಿ ಹೇಗೆ ಅಪೂರ್ವವಾಗಿ ಹೆಣೆದುಕೊಳ್ಳುತ್ತದೆ ಎನ್ನುವ ಕವಿಕಾರ್ಯ ರಹಸ್ಯದ ವಿಶ್ಲೇಷಣೆ ಎಷ್ಟು ಚೆನ್ನಾಗಿ ನಡೆದರೆ ಪ್ರಾಚೀನ ಕವಿತ್ವ ಅಷ್ಟು ಚೆನ್ನಾಗಿ ಅರ್ಥವಾಗುತ್ತದೆ. ತೆಲುಗು ಭಾಷೆಯಲ್ಲಿ ಪ್ರಾಚೀನ ಕಾವ್ಯದ ಹಾಗೂ ಶಾಸನ ಕವಿತ್ವದ ಛಂದಸ್ಸಿನ ಅಭ್ಯಾಸ ಕೆಲಮಟ್ಟಿಗೆ ನಡೆದಿದೆ. ಅಂಥ ಪ್ರಯತ್ನ ಕನ್ನಡ ಭಾಷೆಯಲ್ಲಿ ಕೂಡ ನಡೆಯುವುದಕ್ಕೆ ಹೇರಳವಾಗಿ ಉಪಪತ್ತಿಯುಂಟು.

ಈ ಸಂಪುಟದಲ್ಲಿ ಪದ್ಯಗಳ ಛಂದಸ್ಸುಗಳನ್ನು ಗುರುತಿಸುವಾಗ ಅನುಸರಿಸಿರುವ ಕ್ರಮಗಳು ಈ ರೀತಿಯಾಗಿವೆ :

೧. ಛಂದಸ್ಸುಗಳ ಹೆಸರುಗಳನ್ನು ಎಚ್. ಡಿ. ವೇಲಣಕರ್ ಅವರು ಸಂಪಾದಿಸಿರುವ 'ಜಯದಾಮನ್' ಸಂಕಲನಗ್ರಂಥದ (Haritosha Samiti, Bombay, 1949) ಮತ್ತು ಅವರೇ ಸಂಪಾದಿಸಿರುವ ಹೇಮಚಂದ್ರಕೃತ 'ಛಂದೋನುಶಾಸನ'ದ (Singhi Jain Series–No. 49, Bombay 1961) ಕೊನೆಗೆ ಕೊಟ್ಟಿರುವ ವಿಸ್ತಾರವಾದ ಪರಿಶಿಷ್ಟಗಳನ್ನು ಪರಿಶೀಲಿಸಿ ಆಯ್ದುಕೊಂಡಿದೆ. ಕೆಲವೊಮ್ಮೆ–ಮುಖ್ಯವಾಗಿ ಅಚ್ಚಕನ್ನಡ ವೃತ್ತಗಳ ವಿಷಯದಲ್ಲಿ–ನಾಗವರ್ಮನ (ಸು. ೯೯೦) ಕನ್ನಡ 'ಛಂದೋಂಬುಧಿ'ಯನ್ನೂ ಉಪಯೋಗಿಸಿದೆ. ಆದ್ದರಿಂದ ಆಯಾ ಛಂದಸ್ಸಿನ ಹೆಸರು ಲಕ್ಷಣ ಇತ್ಯಾದಿ ವಿವರಗಳು ಯಾವ ಛಂದೋಗ್ರಂಥದಲ್ಲಿ ಎಲ್ಲಿ ಬಂದಿವೆಯೆಂಬುದನ್ನು ತಿಳಿಯಬೇಕಾದರೆ ಮೊದಲೆರಡು ಆಕರಗಳ ಪರಿಶಿಷ್ಟಗಳನ್ನೂ ಕನ್ನಡ 'ಛಂದೋಂಬುಧಿ'ಯನ್ನೂ ಪರಿಶೀಲಿಸಬೇಕಾಗುತ್ತದೆ.

೨. ಮೊದಲೆರಡು ಆಕರಗಳನ್ನು ಉಪಯೋಗಿಸುವಾಗ, ಸಾಮಾನ್ಯವಾಗಿ ಪಿಂಗಲ ಮುಂತಾದ ಪ್ರಾಚೀನ ಛಂದಶ್ಶಾಸ್ತ್ರಕಾರರು ಕೊಡುವ ಹೆಸರುಗಳಿಗೆ ಆದ್ಯತೆ ಕೊಟ್ಟಿದೆ; ಪಿಂಗಲನ 'ಛಂದಸ್ಸೂತ್ರ'ಗಳಲ್ಲಿ ದೊರೆಯದಿದ್ದಾಗ ಮಾತ್ರ ಕಾಲಾನುಕ್ರಮವನ್ನು ಹಿಡಿದು ಬೇರೆಯವರು ಕೊಡುವ ವೃತ್ತನಾಮಗಳನ್ನು ಗ್ರಹಿಸಲಾಗಿದೆ. ಸಾಮಾನ್ಯವಾಗಿ ಛಂದಸ್ಸುಗಳ ಜನಪ್ರಿಯವಾದ ಹೆಸರುಗಳನ್ನು ಮಾನ್ಯಮಾಡುವಾಗ ಕೆಲವೊಮ್ಮೆ ಈ ಕ್ರಮದಲ್ಲಿ ಸ್ವಲ್ಪ ಏರುಪೇರಾಗಬಹುದು.

೩. ಯಾವುದಾದರೊಂದು ಛಂದಸ್ಸಿಗೆ ಹೆಸರು ಪೂರ್ವೋಕ್ತವಾದ ಮೂರು ಆಕರಗಳಲ್ಲಿಯೂ ದೊರೆಯದಿದ್ದಾಗ, ಮುಖ್ಯ ಛಂದೋವರ್ಗವನ್ನು ಸೂಚಿಸಿ ಪಕ್ಕದಲ್ಲಿ 'ಅನುಕ್ತ' ಎಂದು ಬರೆದಿದೆ (ಉದಾ. ತಿನ. ೨೬೧).

೪. ಅಕ್ಷರಗಳು ಅಳಿಸಿಹೋಗಿರುವುದು ಮುಂತಾದ ಯಾವುದಾದರೂ ಕಾರಣದಿಂದ ವೃತ್ತವನ್ನು ಪೂರ್ಣವಾಗಿ ಗುರುತಿಸಲು ಸಾಧ್ಯವಾಗದಿದ್ದಾಗ, ಇಂತಹವೇ ಕಾರಣಗಳಿಂದ ಛಂದಸ್ಸು ಗೊತ್ತಾದರೂ ಪದ್ಯವು ಅಪೂರ್ಣವಾಗಿದ್ದಾಗ ಕೆಲವೊಮ್ಮೆ ಪದ್ಯದ ಹೆಸರನ್ನು ಸೂಚಿಸಿಲ್ಲ (ಉದಾ. ತಿನ. ೯೫).

೫. ಛಂದಸ್ಸಿನ ದೃಷ್ಟಿಯಿಂದ ಸರಿಯಾಗಿದ್ದರೂ ಇಲ್ಲದಿದ್ದರೂ ಪಾದಗಳು ಪೂರ್ಣವಾಗಿಲ್ಲದ ಪದ್ಯಜಾತಿಗಳು ಕಾಣಿಸಿಕೊಂಡಾಗ, ಅಂತಹ ಪದ್ಯಜಾತಿಗಳ ಮಗ್ಗುಲಿಗೆ 'ಅಸಮಗ್ರ' ಎಂದು ಬರೆದಿದೆ (ಉದಾ. ಕೃನ. ೧೧೭; ತಿನ ೧೧೨, ೧೧೩, ೧೫೧).

೬. ಅಲ್ಪ ಸ್ವಲ್ಪ ಸವರಣೆಗಳಿಂದ ಓದುಗರೇ ತಿದ್ದಿಕೊಳ್ಳಬಹುದಾದ ಲಿಪಿಕಾರಸ್ಖಾಲಿತ್ಯಗಳು ಬಹುವಿರಳವಾಗಿ ಬಂದಿದ್ದಲ್ಲಿ, ಅಂಥ ಪದ್ಯಗಳನ್ನು ಶುದ್ಧವಾದವೆಂದೇ ಗ್ರಹಿಸಿ ಆಯಾ ಛಂದಸ್ಸಿನ ಹೆಸರನ್ನು ಸೂಚಿಸಿದೆ (ಉದಾ. ತಿನ. ೪೦, ೧೨೪); ಪ್ರಸ್ತಾರದಿಂದ ಇಂತಹ ಛಂದಸ್ಸು ಎಂದು ನಿರ್ದಿಷ್ಟವಾಗಿ ತಿಳಿಯುವ, ಆದರೆ ಸಾಮಾನ್ಯವಾಗಿ ಸವರಣೆಗಳಿಂದ ತಿದ್ದಿಕೊಳ್ಳಲು ಸಾಧ್ಯವಾಗದಂತೆ ಬಹುವಾಗಿ ಕೆಟ್ಟಿರುವ ಪದ್ಯಗಳ ವಿಷಯದಲ್ಲಿ ಆಯಾ ಪದ್ಯಜಾತಿಯ ಮಗ್ಗುಲಿಗೆ 'ಅಶುದ್ಧ' ಎಂದು ಬರೆದಿದೆ (ಉದಾ. ಕೃನ. ೨೩, ೭೭, ೧೦೫; ತಿನ. ೪೧, ೧೦೫, ೧೫೧, ೧೯೯, ೨೨೦).

೭. ವೃತ್ತಜಾತಿ ಇಂಥದೆಂದು ನಿರ್ಣಯಿಸಲು ಸಾಧ್ಯವಾಗದೆ ಇದ್ದಾಗ, ನಿರ್ಣಯಿಸಲು ಸಾಧ್ಯವಿದ್ದರೂ ಪಾದಗಳಲ್ಲಿ ಎಲ್ಲಿಯಾದರೂ ವಿಭಿನ್ನಲಕ್ಷಣ ತೋರುವಂತಿದ್ದಾಗ, ಬೇರೆ ಬಗೆಯ ಸಂದೇಹಗಳಿದ್ದಾಗ, ಪ್ರಶ್ನಾರ್ಥಕ ಚಿಹ್ನೆಗಳನ್ನು ಅಂತಹ ಕಡೆಗಳಲ್ಲಿ ಹಾಕಲಾಗಿದೆ (ಉದಾ. ಕೃನ, ೪೭, ೬೯; ತಿನ. ೧೪, ೨೧೮; ವ್ಯೈ. ೧೨೪,೧೨೫). ಹೀಗೆ ತೊಡಕಾಗಿರುವ ವೃತ್ತಜಾತಿಗಳನ್ನು ಕೆಲವೊಮ್ಮೆ ಗುರುತಿಸದೆಯೇ ಬಿಟ್ಟಿರಲೂಬಹುದು.

೮. ಶಾಸನ ಪಾಠದಲ್ಲಿಯೇ ಪದ್ಯಜಾತಿಯ ಸ್ಪಷ್ಟಸೂಚನೆಯಿರುವೆಡೆಗಳಲ್ಲಿ (ಉದಾ. ಕಂದ = ಕ, ಕಂ) ಮಾತ್ರ, ಅಂತಹವನ್ನು ಅಡಿಟಿಪ್ಪಣಿಯಲ್ಲಿ ತೋರಿಸಿಲ್ಲ.

ವರ್ಣವೃತ್ತಗಳಲ್ಲಿ, ವಿಷಮಚತುಷ್ಪದಿಗಳಾದ ಉಪಜಾತಿಗಳಲ್ಲಿ ಭೇದಗಳನ್ನು ಸೂಚಿಸದೆ ಸಾಧಾರಣವಾಗಿ ಉಪಜಾತಿಯೆಂದೇ ಕರೆದಿದೆ. ಅರ್ಧಸಮಚತುಷ್ಪದಿಗಳ ವಿಚಾರದಲ್ಲಿ ಭೇದಗಳನ್ನು ಹೇಳಿ, ಸಾಧ್ಯವಲ್ಲದ ಸಂದರ್ಭ ದೊಳಗೆ ಅರ್ಧಸಮಚತುಷ್ಪದಿಯೆಂದು ಬರೆದಿದೆ. ಮಾತ್ರಾವೃತ್ತಗಳಲ್ಲಿ, ಆರ್ಯೆ ಮತ್ತು ಆ ವರ್ಗದ ಕೆಲವು ಪ್ರಕಾರ ಗಳಾದ ಗೀತಿ, ಉದ್ಗೀತಿ, ಆರ್ಯಾಗೀತಿ, ಮತ್ತು ಸಂಕೀರ್ಣಕ ಅಥವಾ ಸಂಕೀರ್ಣಸ್ಕಂಧಕಗಳ ಬಳಕೆಯಿದ್ದು, ಅವನ್ನು ತಿಳಿಸಿದೆ. ಕನ್ನಡ ಪದ್ಯಜಾತಿಗಳಲ್ಲಿ ಕಂದವುಂಟು. ಆದರೆ ಕರ್ಣಾಟಕ ವಿಷಯಜಾತಿಗಳಲ್ಲಿ ಯಾವುದೊಂದರ ಬಳಕೆಯೂ ಇಲ್ಲ.

ವರ್ಣಸಮಚತುಷ್ಪದೀವೃತ್ತಗಳ ಪ್ರಯೋಗ ಈ ತೆರನಾದುದು: ತ್ರಿಷ್ಟುಪ್ ವರ್ಗದ (೧೧) ಇಂದ್ರವಜ್ರ, ದೋಧಕ, ರಥೋದ್ಧತ, ಶಾಲಿನಿ ; ಜಗತೀವರ್ಗದ (೧೨) ದ್ರುತವಿಲಂಬಿತ, ಭುಜಂಗಪ್ರಯಾತ ; ಅತಿಜಗತೀ ವರ್ಗದ (೧೩) ಪ್ರಹರ್ಷಿಣಿ; ಶಕ್ವರೀವರ್ಗದ (೧೪) ವಸಂತತಿಲಕ; ಅತಿಶಕ್ವರೀವರ್ಗದ (೧೫) ಮಾಲಿನಿ; ಅಷ್ಟಿವರ್ಗದ (೧೬) ಪಂಚಚಾಮರ ; ಅತ್ಯಷ್ಟಿವರ್ಗದ (೧೭) ಪೃಥ್ವಿ, ಮಂದಾಕ್ರಾಂತ, ಶಿಖರಿಣಿ, ಹರಿಣಿ ; ಧೃತಿವರ್ಗದ (೧೮) ಕುಸುಮಿತಲತಾವೇಲ್ಲಿತ ; ಅತಿಧೃತಿವರ್ಗದ (೧೯) ಶಾರ್ದೂಲವಿಕ್ರೀಡಿತ ; ಕೃತಿವರ್ಗದ (೨೦) ಉತ್ಪಲಮಾಲೆ, ಮತ್ತೇಭವಿಕ್ರೀಡಿತ ; ಪ್ರಕೃತಿವರ್ಗದ (೨೧) ಚಂಪಕಮಾಲೆ, ಸ್ರಗ್ಧರೆ ; ಆಕೃತಿವರ್ಗದ (೨೨) ಮಹಾಸ್ರಗ್ಧರೆ.

ತಿನ ೧೬ರಲ್ಲಿ ಶಾರ್ದೂಲವಿಕ್ರೀಡಿತಗಳೂ, ತಿನ ೨೨೦ರಲ್ಲಿ ಚಂಪಕಮಾಲೆ, ಉತ್ಪಲಮಾಲೆಗಳೂ ಅಧಿಕ ಸಂಖ್ಯೆಯಲ್ಲಿವೆ. ತಿನ ೨೩೮, ೩೧೨ರ ಚಂಪಕಮಾಲೆಯ ರಚನೆ ಕುತೂಹಲಕರವಾದ್ದು. ತಿನ ೨೬೧, ೨೭೮ರಲ್ಲಿಯ ತ್ರಿಷ್ಟುಪ್‌ಛಂದಸ್ಸಿನ ಅನುಕ್ತವೃತ್ತವೊಂದು ಛಂದಸ್ಸಿನ ದೃಷ್ಟಿಯಿಂದ ಕುತೂಹಲಕರವಾಗಿದೆ.

ಅರ್ಧಸಮಚತುಷ್ಪದೀ ವೃತ್ತಗಳ ಪ್ರಯೋಗರೀತಿ ಹೀಗೆ: ಆಖ್ಯಾನಕಿ (೧೧, ೧೧) ; ಮಾಲಭಾರಿಣಿ (೧೧, ೧೨), ವಿಪರೀತಾಖ್ಯಾನಕಿ (೧೧, ೧೧), ವಿಯೋಗಿನಿ (೧೦, ೧೧), ಇಂದ್ರವಜ್ರ ಉಪೇಂದ್ರವಜ್ರಗಳ ಮಿಶ್ರಣದ ಆಖ್ಯಾನಕಿ ವಿಪರೀತಾಖ್ಯಾನಕಿಗಳೇ ಉಳಿದವುಗಳಿಗಿಂತ ಸಂಖ್ಯೆಯಲ್ಲಿ ಹೆಚ್ಚು.

ವಿಷಮ ಚತುಷ್ಪದೀವೃತ್ತಗಳು ಅಥವಾ ಉಪಜಾತಿಗಳಲ್ಲಿಯೂ, ಇಂದ್ರವಜ್ರ ಉಪೇಂದ್ರವಜ್ರಗಳ ಮಿಶ್ರಣವೇ ಹೆಚ್ಚು.

ಮಾತ್ರಾವೃತ್ತಗಳು ಪ್ರಯೋಗವಾಗಿರುವ ರೀತಿ : ಆರ್ಯೆ ; ಅಸಮಗ್ರಪಾದಗಳ ಆರ್ಯೆ ಅಥವಾ ಗೀತಿ ; ಆರ್ಯಾಗೀತಿ ; ಉದ್ಗೀತಿ ; ಗೀತಿ ; ಸಂಕೀರ್ಣಕ ಅಥವಾ ಸಂಕೀರ್ಣಸ್ಕಂಧಕ. ಗೀತಿಯೂ ಆ ಬಳಿಕ ಆರ್ಯೆಯೂ ಉಳಿದವುಗಳಿಗಿಂತ ಅಧಿಕಸಂಖ್ಯೆಯಲ್ಲಿವೆ. ತಿನ ೧೪ರಲ್ಲಿ 'ಮಾತ್ರಾವೃತ್ತ (?)' ಎಂದಿರುವುದರ ಸ್ವರೂಪ ಸ್ಪಷ್ಟವಿಲ್ಲ.

ಕನ್ನಡ ಪದ್ಯಜಾತಿಗಳಲ್ಲಿ ಸಾಧಾರಣವಾಗಿ ಪ್ರಯೋಗಾಧಿಕ್ಯವನ್ನುಳ್ಳ ಕಂದ ಕನ್ನಡ ಪದ್ಯಶಾಸನಗಳ ಸಂಖ್ಯೆ ಕಡಿಮೆಯಾಗಿರುವಂತೆ ತೋರುವುದರಿಂದ, ಇಲ್ಲಿ ವಿಶೇಷವಾಗಿ ಕಂಡುಬರುವುದಿಲ್ಲ. ತಿನ ೩೧೨, ವ್ಯೈ ೨೦೭ರ ಕಂದ ಪದ್ಯಗಳು ಭಾಷೆ ಛಂದಸ್ಸುಗಳ ದೃಷ್ಟಿಯಿಂದ ಗಮನಾರ್ಹವಾದ್ದಾಗಿವೆ.

ವಿವಿಧ ಛಂದಸ್ಸುಗಳ ಹಂಚಿಕೆಯ ದೃಷ್ಟಿಯಿಂದ ಒಟ್ಟು ಸಂಪುಟದಲ್ಲಿ ಶ್ಲೋಕಗಳ ಸಂಖ್ಯೆ ಹೆಚ್ಚೆಂದು ತೋರುತ್ತದೆ. ಕೆಲವು ಶಾಸನಗಳಲ್ಲಿ ಅವನ್ನೇ ಅಧಿಕಸಂಖ್ಯೆಯಲ್ಲಿ ಬಳಸಿದೆ (ಉದಾ. ಕೃನ. ೪೬, ೬೯, ೧೧೭ ; ತಿನ ೧೪, ೧೬). ಲಕ್ಷಣದ ದೃಷ್ಟಿಯಿಂದ ಪಾದದ ೫, ೬ ಮತ್ತು ೭ನೆಯ ಅಕ್ಷರಗಳ ಸ್ಥಾನದಲ್ಲಿ ರೂಢವಾದ ಗುರುಲಘುನಿಯಮವನ್ನು ತಪ್ಪದೆ ಪಾಲಿಸಿರುವಂಥವನ್ನು 'ಶ್ಲೋಕ' ಎಂದೂ ಪಾಲಿಸದಿರುವಂಥವನ್ನು 'ಶ್ಲೋಕ ಅಪವಾದ' ಎಂದೂ ತೋರಿಸಿದೆ ; ಹೀಗೆಯೇ ಪಾದಸಂಖ್ಯೆ ಕಡಮೆಯಾಗಿದ್ದಾಗ 'ಶ್ಲೋಕ: ಅಸಮಗ್ರ' ಎಂದೂ ಅಕ್ಷರಸಂಖ್ಯೆಯಲ್ಲಿ ಹೆಚ್ಚು ಕಡಿಮೆಗಳೂ ಇತರ

ಸ್ಖಾಲಿತ್ಯಗಳೂ ಹೆಚ್ಚಾಗಿರುವಲ್ಲಿ 'ಶ್ಲೋಕ; ಅಶುದ್ಧ' ಎಂದೂ 'ಕರೆದಿದೆ. ಶ್ಲೋಕವನ್ನು ಗ್ರಂಥವೆಂದು ಕರೆದಿರುವುದುಂಟು (ಕೃನ ೧೮). ಭಾಷೆ ಛಂದಸ್ಸುಗಳ ದೃಷ್ಟಿಯಿಂದ ಶ್ಲೋಕಗಳ ಪ್ರತ್ಯೇಕ ಪರಿಶೀಲನ ಫಲಕಾರಿಯಾದುದೆಂದು ತೋರುತ್ತದೆ.

ಅಸಮಗ್ರ ಪಾದಗಳ ಛಂದಸ್ಸುಗಳಿರುವ (ಉದಾ. ವೈ ೯೯, ೧೦೪), ಅಪೂರ್ವವೂ ವಿವಿಧವೂ ಆದ ಛಂದಸ್ಸುಗಳಿರುವ (ತಿನ. ೧೯, ೨೬೧; ಕೃನ. ೪೭; ವೈ ೯೯, ೧೦೫), ಬೇರೆ ಬೇರೆ ಕಾರಣಗಳಿಗಾಗಿ ನಿಯಮಕ್ಕೆ ಒಗ್ಗದ ಛಂದಸ್ಸುಗಳಿರುವ (ಉದಾ. ತಿನ. ೧೪. ೨೧೮) ಶಾಸನಗಳು ಛಂದಸ್ಸಿನ ದೃಷ್ಟಿಯಿಂದ ಕುತೂಹಲಕರವಾಗಿವೆ. ವೈ ೯೯ ರಾಮಾಯಣಂ ತಿರುಮಲಾಚಾರ್ಯಕೃತವಾದೊಂದು ತಾಮ್ರಶಾಸನ. ಚಿಕ್ಕದೊಂದು ಕಾವ್ಯ ಎನ್ನುವಂತಿದೆ. ಇದರ ವೃತ್ತರಾಶಿ ಗಮನಾರ್ಹವಾದ್ದು. ಕೆಲವು ವೃತ್ತಗಳು ಅಸಮಗ್ರಗಳಾಗಿದ್ದು ರಚನೆಯ ವೈಚಿತ್ರ್ಯವನ್ನು ಆ ರೀತಿಯಿಂದಲೂ ಸಾಧಿಸಿದೆ.

# INTRODUCTION

This volume is the fifth in the series of Revised Volumes of *Epigraphia Carnatica* and the third and last containing inscriptions from the present Mysore District. Inscriptions from three taluks, *viz.* Kṛishṇarājanagara (Kn.) Mysore (My.) and T. Narasipura (TN.) containing respectively 119, 225 and 323 records from each taluk, are included herein. There are, in all, 667 inscriptions in this volume. Of these, 40 are new records. The III and IV volumes contained 786 and 932 inscriptions respectively. Thus, the total number of inscriptions from Mysore District published so far is 2385.

Of the 667 inscriptions published in the present volume 117 are Tamil records, in Tamil and Grantha characters, while 2 are in Tamil script and Sanskrit language and 1 is in Tamil script and Kannada language. Of the rest, 41 records are in Sanskrit, 16 in Telugu and 1 in Persian. The remaining are in Kannada. A good number of these Kannada records have also portions of them in Sanskrit. As we know, the invocatory and imprecatory verses of quite a large number are invariably in Sanskrit. One of these inscriptions (TN. 16) is the longest record so far available in Karnataka, engraved as it is on a set of 16 copper-plates. It runs into as many as 1390 lines, there being 45 lines on an average, on each face of the plate.

I am thankful to Sri K. G. Krishnan, Superintending Epigraphist, Archaeological Survey of India, Mysore, who has helped me in reading and interpreting some of the Tamil records.

## GANGAS

The earliest of the records noticed in this volume is My. 103, a copper-plate grant of the Gaṅga king Mādhava, son of Koṅguṇivarma. This record, in Sanskrit, is engraved on a set of 3 copper-plates secured by a ring. The seal is said to have had the figure of an elephant. This is a royal grant of the village Kaṇḍasala, to the north of Girinagara, in Kuluṅgijya-rājya. The composer of the record is Sōmaśarma. This record, originally published in the *Mysore Archaeological Report* for 1925, is stated to have been in the possession of an individual in Mysore. The record has not been illustrated. We have not been able to examine the original. Nothing is said about its palaeography nor is anything stated as to how it came into the possession of that individual. The gift village Kaṇḍasala cannot be identified, much less Girinagara or Kuluṅgijya-rājya. The record is dated the 9th regnal year of the king, Kārttika śu 12. The cyclic year is not given. These details of date are insufficient for verification.

The record first refers to Koṅguṇivarma and then to his son Mādhavavarma, also described as Mādhava-mahādhirāja. An analysis of the epithets attributed to Koṅguṇivarma in several Gaṅga records, all of them copper-plates, reveals that while a majority of them describe him as '*sva-khaḍgaika-prahāra-khaṇḍita-mahāśilāstambha-labdha-bala-pārākrāma*', some have the epithet '*svabhuja-java-jaya-janita-sujana-janapada*'. While the former refers to his achievement of breaking the stone pillar, the latter states that he possessed a kingdom inhabited by righteous people and conquered by the force of his victorious arms. But neither of these epithets is found in the present record. On the other hand, Koṅguṇivarma is described in this as one possessed of keen intellect, disciplined by profound study of several *śāstras* and renowned for his victorious battles. Further, the other description commencing with '*dāruṇārigaṇa-vidāraṇōpalabdha*' etc., generally associated with him is also not found in the record under review.

The distribution of inscriptions in the different Volumes previously published are noted below :—

| Taluk | Vol. III (First edition) | Vol. IV (First edition) | Vol. XIV | M.A.R. (from 1923 onwards) | New (included in the present volume) | Total | Remarks |
|---|---|---|---|---|---|---|---|
| *Krishnarajanagara* | — | 61 | 43 | 5 | 10 | 119 | *Sannads*, copies of inscriptions and modern records of the previous volumes are omitted. |
| *Mysore* | 60<br>—5 (a) | — | 85<br>—1 (b)<br>+1 (c) | 16 *Sannads*<br>2 Revised<br>68 | 17 | 225 | (a&b) Six inscriptions of the old volumes III and XIV (No. My. 27–31 and 117 respectively) are omitted.<br>(c) No. 132 of volume XIV is split into two. |
| *T. Narasipura* | 4 *Sannads*<br>6 (a)<br>130<br>+1 (b) | — | 4 *Sannads*<br>130<br>+1 (c) | 1 *Sannad*<br>1 Revised<br>48 | 13 | 323 | (a) 6 records from T. Narasipura taluk (Kempanapura TN 135–38 and Kaṇṇēgāla TN 139, 140) of the previous edition have been included in the Chāmarājanagara taluk.<br>(b) No. 123 and 123a of the previous edition are given two separate numbers (58 and 59) in the present volume.<br>(c) No. 210 of the previous edition is split into two. |
| Total | 186 | 61 | 259 | 121 | 40 | 667 | |

The Nittūr plates of Mādhava[1] is another similar exception. This is a noteworthy feature. It would tempt one to surmise that probably by the time of this record these sets of epithets had not yet been formulated. This may lead one to feel that this is a genuine record. The Śāsanakōṭa plates[2] of Mādhava is dated the 1st year and that is considered to be a genuine record. Hence, this would probably be the second genuine copper-plate grant of this king. But, since the original has not been examined by us, it is difficult to say anything definitely about this.

Kn. 48 from Sāligrāma is a record of Gaṅga Śripurusha, engraved on a set of five copper-plates. The record is dated the first year of his rule which commenced in c. 725 A.D. It registers a gift of the village Bāradūr in Tēgaṭṭūr-vishaya to Bāṇaśarma, a resident of Vātāpi. This latter place is obviously identical with Bādāmi, the capital of the early Western Chālukyas, of whom the last three rulers, *viz.*, Vijayāditya, Vikramāditya II and Kirtivarma II were his contemporaries. His relationship with them was quite cordial and he also assisted them in their battles against the Pallavas. How or why Bāṇaśarma of Bādāmi became the donee of the grant is not clear. It is quite possible that he or his ancestors might have migrated from that region. M. H. Krishna has identified Tēgaṭṭūr-vishaya with the region around Tēgalpaṭṭu, a village in Bangalore taluk.

The record refers to Śivamāra I, grandfather of Śrīpurusha, also as Śrīpurusha. This name is not attributed to Śivamāra I in any other record. He is also called *pṛithvī-koṅgaṇi-vṛiddharāja*, while Śrīpurusha, the donor, is referred to as *pṛithuvī-koṅguṇi-mahārāja* and Bhūvikrama, elder brother of his grandfather is given the name *koṅguṇi-mahārāja*. Bhūvikrama, according to the record, was a second name. This may be compared with the Kulagāṇa copper-plate[3] of Śivamāra I wherein Bhūvikrakama, referred to as Śrivallabha, is given the epithet *pṛithivī-koṅgaṇi-vṛiddharāja*. It is not improbable that *Śrīpurusha* was a title borne by Śivamāra I, after whose epithet the grandson was named.

TN. 207 is a stone inscription of Śrīpurusha dated the first year of his rule, corresponding to 725 A.D. The details of date given in it, *viz.*, Kārttika, Puṇṇame are insufficient for verification. The purpose of the record seems to register a remission of taxes by Arakēsi, son of Paramakūḷa, under orders. The person who gave the order may be the king himself. Arakēsi, thus, would be one of the officers under Śrīpurusha. My. 192 of the same king states that Araṭṭitirār described as the *bāḷāḷ, i.e.*, swordsman of Siṅgadikshar, was governing Kūḍalūr. This latter, therefore, appears to have been a senior officer. My. 117 registers the death by *samādhi* of *mahāprabhu* Gōvapayya, probably another subordinate officer under Śrīpurusha who appears to have been mentioned in the record.

My. 183 from Varuṇa is a record of the same king, Śrīpurusha. It states that Chottamman, the king of Araṭṭis (*Araṭṭigaḷ-arasar Chottamman*) was administering Eḍatoṛenāḍu-1000. What follows thereafter is not clear. It could only be said that some arrangement (grant ?) was made for feeding the army on its way to and from. It appears that the village was situated on the military highway and the villagers were to bear the responsibility of feeding it. We have such instances in the Chōḷa records wherein the caravans and the swordsmen were provided with similar facilities.[4] The record under review seems to be an early reference to such a kind in the Kannada country.

1. *MAR.*, 1930, No. 88
2. *EI.*, XXIV pp. 234-39
3. EC., IV (1975), *Introduction*, p. CX
4. *Ibid.*, p. CXIV

TN. 253 and 255 of c.8–9th century, have been assigned to Śrīpurusha by R. Narasimhachar and Rice respectively. The former record refers to the king as *koṅguṇi-mahārāja* and registers a gift (exemption?) of certain taxes like *pattoṇḍi* by the queen of Permanaḍi *i.e.*, Koṅguṇi-mahārāja. *Pattondi* appears to be identical with *dasavanda*.[1] In TN. 255 the king is referred to as Koṅguṇi Muttarasa.

Kn. 49 is a copper-plate record of Rāchamalla I, son of the younger brother of Śivamāra II. It is dated the day of solar eclipse in Śaka 741, the king's first regnal year, corresponding to 819 A.D., June 26. The orthography of the record is bad. It refers to Avinita as *Koṅgaṇi-mahādhirāja*, Śivamāra I as *Koṅgaṇi-mahārāja*, Śrīpurusha as *Pṛithuvī-koṅgaṇi-mahārāja* and Śivamāra II as *Koṅgaṇi-mahārājādhirāja*. The epithet applied to Śrīpurusha herein is identical with the one noted above. Rāchamalla I, the donor, is described as *Koṅgaṇivarma-dharma-mahārājādhirāja-paramēśvara-permānaḍi*. The gift village *i.e.*, Perjjaraṅgi was situated in Eḍedinḍe-70 of Maṟugare-vishaya.

TN. 313 from Ālgōḍu is a record of Satyavākya-permānaḍi. Narasimhachar has identified him with Būtuga (II), son of Eṟeyappa.[2] But the record, the original of which has been examined by us, may be assigned to the 9th century. The king, therefore, may be identified with Rāchamalla I who is known to have borne the title *Satyavākya*.

Kn. 105 from Gaḷigēkere is yet another copper-plate record engraved on a set of five copper-plates. Even in this Śivamāra I is described as *Koṅgaṇi-mahārāja* while Śivamāra II is called *Koṅguṇi-mahārājādhirāja*. This record registers a grant of the village Koḷanellūru by the king Raṇavikramayya, son of Vijayāditya, the younger brother of Śivamāra II. This record is considered to be one of the spurious Gaṅga records,[3] but without any valid reason. One peculiar orthographical feature that could be noticed in the record is the use of *bindu* to indicate the doubling of the consonant letter that follows—as *Kirātāṃrjunīya* and *Duṃrvinīta* instead of *Kirātārjjunīya* and *Durvvinīta* in line 16. This is a feature found in some of the palm leaf manuscripts.[4] It may be that this is considered as one of the reasons for considering the record to be spurious. But a more important reason appears to be the name of the donor king himself. The record calls him Raṇavikramayya. We know that Rāchamalla I had a son Nītimārga Eṟeyaṅga. We have identified Raṇavikrama of the record under review, with Nītimārga Eṟegaṅga. Rice has suggested that this Raṇavikrama may be Būtarasa or Būtuga I.[5] But from the Vaḷḷimalai inscription[6] we learn that Śrīpurusha, son of Śivamāra had a son named Raṇavikrama and Raṇavikrama's son was Rājamalla. In many Gaṅga records wherein we get a genealogy, it is stated that Śrīpurusha had two sons Śivamāra II and Vijayāditya. Raṇavikrama, noted above, has been identified with Vijayāditya. In the record under review Raṇavikramayya is said to be the son of Rājamalla and grandson of Vijayāditya. As seen above, Vijayāditya was also known by the name Raṇavikrama. Hence, it is not surprising that the grandson was given that name by his father Rājamalla, probably, after his own father. This apart, there is no other evidence to set aside the Gaḷigēkere plates as spurious. And this does not appear to be a serious objection.

1. M. Chidanandamurthy : *Kannaḍa Śāsanagaḷa Sāmskṛitika Adhyayana* (Kannada-1966), p. 370
2. *MAR.*, 1912, p. 37
3. N. L. Rao and R. S. Panchamukhi : *Karṇāṭakada Arasu-manetanagaḷu* (Kannada), p. 115
4. D. L. Narasimhachar : *Kannaḍa Grantha Sampādane* (Kannada–1964), p. 94
5. *EC.*, IV (Rice's edition) *Introduction*, p. 11.
6. *EI.*, V, p. 140.

TN. 145 from Vijayapura refers to the rule of Śivamāra II, son of Koṅguṇi Muttarasa *i.e.*, Śrīpurusha. This registers a grant as *pattondi* to the Twelve of Kiṟupeḷnagara when Maṇale-arasa was ruling Kūmbaḍi and Kiḷale-nāḍ and Peḍedi of Kuḷattūr was administering Kiṟupeḷnagara. TN. 146 from the same place is a stone record in c. 9th century characters referring to the rule of Eṟeyappa. R. Narasimhachar has assigned this record to Eṟeyappa (Mārasimha Eṟeyappa), son of Śivamāra II.[1] This records the settling of tenants (*okkalu*) upon the land by Śaucha Maṇaleya and Nanni Maḷalūr, after paying gold to the Twelve of Kiṟuveḷnagara and with the permission of Raṇapāra and Maṇaleyarasa. Narasimhachar who has identified Maṇale-arasa of the earlier reeord with Maṇaleyarasa of the latter record, comes to the conclusion that Eṟeyappa of the latter record is identical with Mārasimha Eṟeyappa, son of Śivamāra II. He further identifies Raṇapāra of the record with Raṇapākarasa figuring in the Kūḍalūr inscription.[2] But therein Raṇapākarasa is stated to be ruling while Raṇapāra of the record under review may just be a subordinate officer. Maṇale-arasa and Maṇaleyarasa of the two records may not be identical. In fact, it may simply be a reference to the chiefs of the Maṇale family who were subordinate officers under the respective kings.

More important is the point that we do not have any record referring to the rule of Mārasimha Eṟeyappa. In fact, he figures as a *yuvarāja* in his known records. There is reason to believe that he predeceased his father. Further, in those records he is known as Mārasimha Eṟeyappa. Hence, it is quite possible that Eṟeyappa of this record is identical with Nītimārga Eṟegaṅga, son of Rāchamalla I. Narasimhachar assigns the record to c. 800 A.D. But we have to assign it to c. 850 for the reasons noted above.

The Doḍḍahuṇḍi epigraph (TN. 257) has been edited also by Dr. Fleet.[3] The major change in the reading of the text by Fleet is in lines 6, 9-10. Rice had read line 6 as *naḍigaḷa su* (*śu*) *putra Satyavākya-permmānaḍigalguḷda*. Thus, Satyavākya-permānaḍi is referred to here only as a good son. Fleet read the same as *agga-putra* and considered him as the eldest son. Further, lines 9-10 were read by Rice as *koṭṭadu Kappahaḷḷi*. Fleet read it as *koṭṭadu gachchhaṃ māḍi*. We have examined the estampages of this record. The reading of Rice as *su-putra* will have to be corrected as *śu-putra*. Fleet has read it as *agga-putra*. But this reading is not correct. Further, in lines 9-10, Fleet read *Kappahaḷḷi* as *gachchhaṃ māḍi* and gave an entirely different meaning. But *ppahaḷḷi* of line 10 cannot be read otherwise. It is definitely the name of a village and Rice has taken it to be Kappahaḷḷi, although *Ka* is not visible. Yet, his reading may be accepted. But the text of lines 17-21 as read by Rice is certainly wrong and Fleet has read it more satisfactorily, although its meaning is not quite clear.

Rice has assigned this record to c. 865 A.D.,[4] but has identified the king, who is reported to have died, with Nītimārga Eṟegaṅga.[5] His son Satyavākya, who was by his side at the time of his death, has, however, been assigned a period of rule commencing from 870.A.D.[6] The Doḍḍahuṇḍi record must have come into existence sometime in 870 A.D. only, when Nītimārga Eṟeyaṅga died and was succeeded by his son Satyāvakya Rāchamalla II. *Mane-magattin* has been taken by us to mean house-servant. Chidanandamurthy[7] has taken the word *manemaga*

1. *MAR.*, 1912, p. 36-37.
2. *Ibid.*
3. *EI.*, VI, pp 41-45.
4. *Mysore and Coorg from Inscriptions* (1909), p. 186.
5. *Ibid.*, p. 43.
6. *Ibid.*, Table Nos. 13 and 14 on p. 50.
7. *Op. cit.*, p. 306-07.

as the Kannada form of *kulaputra*, a term used by Bāṇa in his *Harshacharita*. In the type of feudalism that existed in the period, the house-servants were treated as members of the household itself and they dedicated their lives for the master

TN. 123 from Doḍḍābāgilu is a badly damaged fragmentary record that refers to Noḷambāntaka Permānaḍi, Vikramāditya and Udayāditya. This Noḷambāntaka of the record has been identified with Mārasimha II by Rice[1] who says that it records a grant made on the death of Mārasimha II in 974 A.D. But an examination of the original shows clearly that the record cannot be assigned to a period later than the 9th century. The record also seems to register the death of Noḷambāntaka Permānaḍi. The title *Noḷambāntaka* appears to have induced Rice to identify the king with Mārasimha II. On the other hand, we know that Nītimārga Eṟeyappa, son of Būtuga I, who was ruling jointly with his uncle Rāchamalla II, defeated in several battles Noḷamba Mahēndra and around c. 895–96 A.D., killed him. It is quite likely that Eṟeyappa, as a consequence, took the title *Noḷambāntaka*, a point not known till now.

Hence, the record may be assigned to Nītimārga Eṟeyappa II and to a date within a few years after 895–96A.D., probably before c. 900. It may be noted that the poet Guṇavarma refers to Mahēndrāntaka who has been identified with this Eṟeyappa. Therefore, *Noḷambāntaka* of the record under review seems to be the same as *Mahēndrāntaka* of Guṇavarma.

From the inscription (TN. 200) dated 935 A.D., we learn that Talakāḍ, then known as Taṟekād, was probably being administered by a body called *mahānagara*. This body, as also the Twentyfive and an individual named Mañchayya who was a *paṭṭaṇavasantara* donated money for the repair of the tank. The exact meaning of the term *paṭṭaṇavasantara* is not clear. Was it an office like that of *paṭṭaṇasvāmi*? The record refers to the rule of Nītimārga-permānaḍi, *i.e.*, Rāchamalla III, son of Eṟeyappa. Narasimhachar has identified him with Eṟeyappa II, son of Būtuga I. But the chronology would be against it.

The Haḷē Bōgādi inscription (My. 222) is an incomplete record of c. 10th century. It refers to Mārasiṅgavarmma and Akālavarśa. This Akālavarśa may probably be identified with the Rāshṭrakūṭa king Kṛishṇa III, and Mārasiṅgavarmma might as well be Mārasimha II.

TN. 320 from Basavanahaḷḷi is dated the year Vibhava, the 6th year of the rule of Satyavākya-permāḍi. It is in characters of c. 10th century. The cyclic year Vibhava occurred in 848, 908 and 968 A.D. In 848 A.D., we find Eṟegaṅga II ruling. But he bore the title *Nītimārga* and not *Satyavākya*. M. H. Krishna is inclined to assign the record to Rāchamalla II. But this king came to rule as early as 870 A.D., and 908 A.D. cannot be his 6th regnal year. It is more likely that the king mentioned herein is Mārasimha II whose 6th regnal year fell in 968–69 A.D.

Kn. 41 from Chikka Hanasōge is a badly damaged record engraved on a hero-stone. It eulogises the valour of a hero of the Gaṅga family in a battle at Kōgiyūr, and registers a grant of land as *kalnāḍu* by Gōvindara and the Thousand. Narasimhachar assigned this record to c. 900 and to the reign-period of Eṟeyappa, son of Būtuga I. But it is in characters of c. 10th century and on the basis of the name Gōvindara who figures as a donor herein, it would be difficult to make such an identification.

## CHALUKYAS

About a dozen records in the present volume refer to three members of the Chālukya family, who were feudatory chieftains. They are described as belonging to Chālukya-vamśa,

1. *Op. Cit* p. 14

bearing the crest of Ādivarāha. They are *mahāsāmanta* Narasinga, Durga and Goggi. My. 167 from Varuṇa is a damaged record that refers to Narasinga and his wife Gāvilabbarasi. The Kukkarahaḷḷi epigraph (My. 223) records the construction of the Nārasingēśvara temple by this chief who is further described as *abhimāna-rāmana*, *Chalukyarjuna* and *āhava-nirbhaya*. My. 168 from Varuṇa registers a gift of a village and lands to god Būtēśvara, made over to Nannikartāra-bhaṭāra by *mahāsāmanta* Durga who bears, among others, epithets like *ayyanachakri*, *aynūrvara kōṭe* and *māvanakēsari*. My. 129 from Varakōḍu, a village adjacent to Varuṇa, is a newly discovered record engraved in characters similar to those of My. 168. It records the setting up of a *niśidhi* for Piṭṭabbe, the queen (*arasi*) of Durga. This latter may, in all probability, be identified with his namesake noted above. It is interesting to note that this queen was obviously a follower of Jaina faith while Durga was a devotee of Śiva. The recipient of the gift made by him was Nannikartāra-bhaṭāra who must have been the *āchārya* of the Būtēśvara temple.

Yet another chief of this family that figures in the records at Varuṇa is Goggi. He also made a gift of a village to god Būtēśvara, made over to Nannikartāra-baḷara, evidently the same who figures as the recipient of the gift made by Durga. There are half a dozen hero-stones (My. 173--178) registering the death of several individuals, probably in a single fratricidal battle, on behalf of Uttavagaḷḷa against Eḍavari. These are described as *manevagati* or *manemagati* (taken to mean house-servant) of Goggi. My. 176 is set up in memory of Eṛe-anga, in a battle between Polekēsi and Būdiga in which the deceased hero killed the horseman (*kudurekāṛa*) of the lady (*oḍati*-wife?) of Polekēsi. Obviously, the hero was fighting on behalf of Būdiga.

The readings of the texts of these records given here vary considerably from the original readings of Rice. Būdiga mentioned herein is taken to be Būtuga by Rice, while Polekēsi is surmised to be Satyāśraya, son of Tailapa II. But this identification of Būdiga with Ganga Būtuga creates chronological difficulties, for, Polekēsi, identified with Satyāśraya, will have to be placed in the last decade of the 10th century at the latest, by which time Būtuga, presuming him to be Būtuga II, was no more alive. The grounds for identifying Polekēsi with Satyāśraya are not convincing.

Goggi of these records certainly belongs to one of the branches of the Chālukya family. The mutual relationships among this Goggi, Durga and Narasinga are not clear, although that all of them belonged to the same family is certain. These records have to be assigned to a period of about 50 years of the 10th century. In this connection we may note that some scholars have tried to identify Goggirāja, figuring in some Sēüṇa records as a father-in-law of Sēüṇa Vēsugi, with his namesake of the Śilāhāra, Chālukya of Lāṭa and the Chālukya Goggi figuring in the Varuṇa inscriptions.[1] The identity of Gōggirāja with his namesake of the Śilāhāra family has been brushed aside due to chronological difficulties. Likewise, the identification of Goggi, son of Bārappa of Lāṭadēśa, also is found untenable since it is based only on similarity of names. Hence, it is suggested that Goggi, father-in-law of Vēsugi, might as well be Goggi of the records under review. However, from what is stated it would mean that Goggirāja belonged to the Chālukya family of Kalyāṇa. But, there is nothing to substantiate this surmise, which is also based, not on the similarity of the names of chiefs but on that of the family, *viz*., Chālukya.

Almost in the same period, a certain Pandiga, a feudatory belonging to the Chālukya family was governing Kadambaḷige-1000, in 968 A. D. The record[2] gives a genealogy of this

1. S. H. Ritti and B. R. Gopal (Ed): *Studies in Indian History and Culture*, pp. 226-28.
2. *EC*., XI Cd. 74.

belonged, as *Tēyakula* and the further far-fetched argument that Tēja was one of the chiefs of the Uchchaṅgi Pāṇḍya family who had some sort of connection with the Koḍumbāḷūr chiefs, and therefore, Tēyakula stands for the family of these later chiefs. Further, Kottamaṇḍala is identified with Kottanūr or Koṟṟanūr, in Coimbatore District. But, Aprамēya is clearly described as *Tellakulatilaka*. He is also described as *Kottamaṇḍalanātha*, lord of Kottamaṇḍala and *Kottamaṅgeyāṇma*, lord of Kottamaṅge. This place may have to be identified, in all probability, with a place named Kottamaṅgalam. One such place is found in the Lalgudi taluk of Tiruchirapalli District, while another is in the Kumbhakonam taluk of Tanjavur District, of Tamilnadu. It is quite possible that Aprамēya was a Chōḷa general governing some territory nearer the Chōḷa capital and was deputed by the Chōḷa to drive out the Hoysaḷa. We do not know if Aprамēya was governing the newly acquired region.

Of the records of the next ruler, three are from Taḍimāliṅgi. TN. 233 also engraved on the basement stones to the north and east of the same Janārdana temple is a very important record. It refers to the 4th regnal year of Uḍaiyār Chōḷagaṅgadēva and registers a gift of 2 *māḍais* for burning a lamp (*piḍiviḷakku*) and celebrating a festival of *tiruvōlakku*. The gift was made to the temple of Ravikulamāṇikka-viṇṇagar-āḷvār in Jananāthapura said to be situated in Iḍai-nāḍ, of Gaṅgaikoṇḍaśōḷa-vaḷanāḍ in Muḍigoṇḍaśōḷa-maṇḍalam. In the record of Rājarāja I from the same place noted above (TN. 232), this village, known only as Māyilaṅgai, is said to be situated in Iḍai-nāḍ, to the south of Gaṅgapāḍi. Gangaikoṇḍaśōḷa-vaḷanāḍ appears to have been the name given to it after the date of Rājarāja's record *Gaṅgaikoṇḍāśōḷa* is the title associated with Rājēndra I and Rice has therefore identified Uḍaiyār Chōḷagaṅga with Rājēndra I. This identification becomes questionable for the said record is dated only in the 4th regnal year of the king who is said to have taken this particular title only after his expedition upto the Ganges. That event occurred only after his 10th regnal year (1021-22 A.D.) whereafter alone could he have taken the title. This is no doubt a serious objection.

I have identified Oḍaiyār śrī Chōḷa-gāṅgadēva of the Suttūr record[1] with Rājēndra-chōḷa I. My attention was drawn to this fact and a question how the division could be called Gaṅgaikoṇḍaśōḷa-vaḷanāḍ as early as in the 4th regnal year of Rājēndra-chōḷa I has been asked. But, in the record under review, the donor is Pañchavan Manukulakēsari *alias* Pañchavan-mārāyan. It has been shown that Pañchavan-mārāyan is the name given to Rājēndra-chōḷa I when he was yet a prince. Naturally, the donor here could be the same Rājēndra-chōḷa. He is also referred to in the record as Pañchavan Manukulakēsari. The Balamuri record[2] states that Pañchavan-mārāya, a bee at the lotus-feet of Chōḷa Rājāraja, was the *mahādaṇḍanāyaka* of both the Gaṅga and the Beṅgi *maṇḍalas*. The date of this record is Śaka 934 corresponding to 1012 A.D., which was the 28th regnal year. That even as a prince Rājēndra-chōḷa had assumed the title Pañchavan-mārāyan is thus clear. The donor in the record under review is therefore, Rājendra I himself.

It is no doubt true that in his 10th regnal year Rājēndra-chōḷa appointed a member of the royal family as a viceroy of the erstwhile Pāṇḍya territory occupied by his father Rājarāja I and himself. This viceroy and those that followed him called themselves Chōḷa-Pāṇḍyas.[3] One of

1. *EC.*, III (1974), Nj. 213.

2. *EC.*, III (Rice's Edition), Sr. 140 ; A Revised reading of the text of this record is given in the forthcoming *EC.*, Vol. VI (Sr. 78).

*SII.*, XIV, *Introduction* p. iv.

